ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

**ಪಿ.ಆರ್. 2023**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಹಿರೇಕೊಳಲೆ ಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಮಸಾವಿ 2009(3), ದಿನಾಂಕ: 04.02.2009.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ ತಾಂ.ಸ.2.ಸ.ಇಂ.4/ ಚಿ.ಜಿ. ಚಿ.ತಾ/ ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ/ 2011/ 2096, ದಿನಾಂಕ 15.06.2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ "4702-00-101-1-07-139 ಕೆರೆಗಳ ಆಧುನೀಕರಣ-ಪ್ರಧಾನ ಕಾಮಗಾರಿಗಳು" ಶೀರ್ಷಿಕೆ ಅಡಿ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಹಿರೇಕೊಳಲೆ ಕೆರೆ ಅಭಿವೃದ್ಧಿ ಕಾಮಗಾರಿಯ ರೂ.285.00ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ 3ನೇ ಬಾರಿಗೆ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 02.02.2012 |
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 30.01.2012 |
| ವಿಜಯ ಕರ್ನಾಟಕ, ದಿ ಹಿಂದೂ ಮತ್ತು ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ | 06.02.2012 |
| ಹೊಸದಿಗಂತ ದಿನಪತ್ರಿಕೆ | 05.02.2012 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು, ಇವರ ಟೆಂಡರ್ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 282,61,315/- |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 329,85,888/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಸಿ.ಹೆಚ್.ವಿ.ಎನ್.ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | 508,33,129/- | 79.86 ಹೆಚ್ಚು | 54.10 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಿ.ಹೆಚ್.ವಿ.ಎನ್.ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 54.10 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ **ಶೇ.13.00%** ಹೆಚ್ಚಿನ ದರಗಳಿಗೆ ಅಂದರೆ ರೂ.**372,74,053/–** ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 34 ಕೆಜಿದು 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಹಿರೇಕೊಳಲೆ ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 329,85,888/–ಗಳ ಮೇಲೆ ಶೇ. 13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 372,74,053/–ಗಳಿಗೆ (ರೂ ಮೂರು ಕೋಟಿ ಎಪ್ಪತ್ತೆರೆಡು ಲಕ್ಷ ಎಪ್ಪತ್ತ ನಾಲ್ಕು ಸಾವಿರದ ಐವತ್ತ ಮೂರು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಸಿ.ಹೆಚ್.ವಿ.ಎನ್.ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 2020**

## ಇಂಧನ ಸಚಿವಾಲಯ

**ವಿಷಯ:** M/s KSK Wind Power Sankonahatti Athni Private Limited ಇವರಿಗೆ ಮಂಜೂರಾಗಿರುವ 11.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 82.50 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರಿ ಆದೇಶ ಸಂಖ್ಯೆ: ಇಎನ್ 318 ಎನ್‌ಸಿಇ 2006 ದಿನಾಂಕ: 16.10.2006.

2 ಸರ್ಕಾರಿ ಆದೇಶ ಸಂಖ್ಯೆ: ಇಎನ್ 225 ಎನ್‌ಸಿಇ 2011 ದಿನಾಂಕ: 10.05.2011.

3 ಸರ್ಕಾರಿ ಆದೇಶ ಸಂಖ್ಯೆ: ಇಎನ್ 301 ಎನ್‌ಸಿಇ 2011, ದಿನಾಂಕ: 15.09.2011.

4 ಸರ್ಕಾರಿ ಪತ್ರ ಸಂಖ್ಯೆ : ಇಎನ್ 301 ಎನ್‌ಸಿಇ 2011, ದಿನಾಂಕ 23.12.2011.

5 ದಿನಾಂಕ: 21.12.2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : Four EF Wind Power Pvt. Ltd. ರವರಿಗೆ ಗುಲ್ಬರ್ಗಾ, ಬಾಗಲಕೋಟೆ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ ಒಟ್ಟು 56.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : Four EF Wind Power Pvt. Ltd. ರವರಿಗೆ ಮೇಲಿನ ಆದೇಶದಲ್ಲಿ ಹಂಚಿಕೆ ಮಾಡಲಾಗಿದ್ದ ಪವನ ವಿದ್ಯುತ್ ಯೋಜನೆಯಿಂದ 11.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ : KSK Wind Power Sankonahatti Athni Private Limited ಇವರಿಗೆ ಬೆಳಗಾಂ ಜಿಲ್ಲೆಯ Parthanahalli, Gundevadi and Chamkeri ಗ್ರಾಮಗಳಲ್ಲಿ ಅನುಷ್ಠಾನಮಾಡಲು ವರ್ಗಾವಣೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ M/s KSK Wind Power Sankonahatti Athni Private Limited ಇವರಿಗೆ ಬೆಳಗಾಂ ಜಿಲ್ಲೆಯ Parthanahalli, Gundevadi and Chamkeri ಗ್ರಾಮಗಳಲ್ಲಿ ಒಟ್ಟು 71.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

| Geographical area details | Transferred capacity in MW | Proposed capatity in MW |
|---|---|---|
| The identified area is a ground level palin with gentle elevation has NE-SW orientation. It is located on the West of Chamkeri village and has average elevation of 600m and it is held in the following Geographical Co-ordinates:<br>Latitude:16$^0$45'0"- 16$^0$48'58"N<br>Longitude: 75$^0$ 5'47" - 75$^0$ 10'0"E<br>Ridge peaks: 617, 628, 621, 571, 592, 612, 615 and 586m Amsl. | 11.50 | 71.00 |

ಅದರಂತೆ M/s KSK Wind Power Sankonahatti Athni Private Limited ರವರು ದಿನಾಂಕ 26.9.2011ರಂದು ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಂಡಿದ್ದರು, ತದನಂತರ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ 23.12.2011ರ ಪತ್ರದಲ್ಲಿ M/s KSK Wind Power Sankonahatti Athni Private Limited ರವರಿಗೆ ದಿನಾಂಕ 15.9.2011ರ ಸರ್ಕಾರಿ ಆದೇಶದಲ್ಲಿ ಹಂಚಿಕೆಮಾಡಿದ್ದ 71.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಆದೇಶವನ್ನು ಮುಂದಿನ ಆದೇಶದವರೆಗೆ ತಡೆಹಿಡಿಯುವಂತೆ ತಿಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s KSK Wind Power Sankonahatti Athni Private Limited ರವರು ಈ ಹಿಂದೆ ಪ್ರಸ್ತಾಪಿಸಿದ್ದ 250 ಕಿ.ವ್ಯಾ. ಸಾಮರ್ಥ್ಯದ ವಿಂಡ್ ಟರ್ಬೈನ್ ಬದಲಾಗಿ 1500 ಕಿ.ವ್ಯಾ. ಸಾಮರ್ಥ್ಯದ ಟರ್ಬೈನ್‌ಗಳನ್ನು ಅಳವಡಿಸುವುದರಿಂದ ಸಾಮರ್ಥ್ಯವನ್ನು ವೃದ್ಧಿಸಲು ಪರಿಗಣಿಸುವಂತೆ ಕೋರಿರುವುದರಿಂದ ಪ್ರಸ್ತಾವನೆಯನ್ನು ಹೊಸ ಹಂಚಿಕೆಯ ಬದಲಾಗಿ ಸಾಮರ್ಥ್ಯವನ್ನು 11.50 ಮೆ.ವ್ಯಾ. ನಿಂದ 82.50 ಮೆ.ವ್ಯಾ. ಸಾಮರ್ಥ್ಯಕ್ಕೆ ವೃದ್ಧಿಸಲು ಸಮಿತಿಯು ಶಿಫಾರಸ್ಸಿಸಿದೆ. ಆದುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 301 ಎನ್‌ಸಿಇ 2011, ಬೆಂಗಳೂರು, ದಿನಾಂಕ: 02.8.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ M/s. KSK Wind Power Sankonahatti Athni Private Limited ಇವರಿಗೆ ಬೆಳಗಾವಿ ಜಿಲ್ಲೆಯ Parthanahalli, Gundevadi and Chamkeri ಗ್ರಾಮಗಳಲ್ಲಿ ಒಟ್ಟು 71.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆಮಾಡಿರುವ ಸರ್ಕಾರಿ ಆದೇಶ ಸಂಖ್ಯೆ ಇಎನ್ 301 ಎನ್‌ಸಿಇ 2011 ದಿನಾಂಕ 15.9.2011 ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದುಪಡಿಸಲಾಗಿದೆ ಹಾಗೂ ದಿನಾಂಕ 23.12.2011ರ ಪತ್ರವನ್ನು ಹಿಂಪಡೆದು **'ಕೆಳಕಂಡಂತೆ'** ಆದೇಶಿಸಿದೆ.

M/s. KSK Wind Power Sankonahatti Athni Private Limited ಇವರಿಗೆ ಬೆಳಗಾವಿ ಜಿಲ್ಲೆಯ Parthanahalli, Gundevadi and Chamkeri ಗ್ರಾಮಗಳಲ್ಲಿ ಅನುಷ್ಠಾನಮಾಡಲು ಅನುಮತಿಸಿರುವ 11.50 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು **82.50 ಮೆ.ವ್ಯಾ** ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಗಿನ ಷರತ್ತಿಗೊಳಪಟ್ಟು **ಹೆಚ್ಚಿಸಿ** ಆದೇಶಿಸಿದೆ.

| Geographical area details. | Sanctioned capacity in MW | Enchancement proposed in Stage-I in MW | No. of WTGs & rating in KW | Total capacity including proposed enhancement in MW |
|---|---|---|---|---|
| The identified area is a ground level plain with gentle elevation has NE-SW orientation. It is located on the West of Chamkeri village and has average elevation of 600m and it is held in the following Geographical Co-ordinates:<br>Latitude:16$^0$45'0"- 16$^0$48'58"N<br>Longitude:75$^0$5'47" - 75$^0$10'0"E<br>Ridge peaks: 617, 628, 621, 571, 592, 612, 615 and 586m Amsl. | **11.50** | **71** | **82.50 MW (55 x 1500)** | **82.50** |

1 M/s. KSK Wind Power Sankonahatti Athni Private Limited ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 M/s. KSK Wind Power Sankonahatti Athni Private Limited ರವರು ಸಂಬಂಧಿಸಿದ ಎಸ್ಕಾಂನೊಂದಿಗೆ ಪಿಪಿಎ / ಕೆ.ಪಿ.ಟಿ.ಸಿ.ಎಲ್.ನೊಂದಿಗೆ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ.

3 ಸದರಿ ಪವನ ವಿದ್ಯುತ್ ಯೋಜನೆಗೆ ಯಾವುದೇ ಸರ್ಕಾರಿ ಜಮೀನಿನ ಅವಶ್ಯಕತೆ ಇಲ್ಲದೆ ಸಂಪೂರ್ಣವಾಗಿ ಖಾಸಗೀ ಜಮೀನಿನಲ್ಲಿಯೇ ಬರುತ್ತದೆ ಎಂಬುದನ್ನು ಖಾತರಿ ಪಡಿಸಿಕೊಳ್ಳುವ ನಿಟ್ಟಿನಲ್ಲಿ ಖಾಸಗೀ ಜಮೀನಿಗೆ ಸಂಬಂಧಿಸಿದ ಆರ್‌ಟಿಸಿ ಪ್ರತಿಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸತಕ್ಕದ್ದು ಹಾಗೂ ಅಭಿವೃದ್ಧಿದಾರರು ಜಮೀನಿನ ಮಾಲೀಕರಿಂದ ಈ ಬಗ್ಗೆ ಸಮ್ಮತಿಯನ್ನು ಪಡೆದುಕೊಳ್ಳತಕ್ಕದ್ದು. ಒಂದು ವೇಳೆ ಇದಕ್ಕೆ ತಪ್ಪಿದಲ್ಲಿ ಈ ಆದೇಶ ತಂತಾನೆ ರದ್ದಾಗುವುದು.

4 ಈ ಯೋಜನೆಗೆ ಅವಶ್ಯವಿರುವ ಅರಣ್ಯ ಇಲಾಖೆ / ಕಂದಾಯ ಇಲಾಖೆ/ ಅರಣ್ಯ, ಪರಿಸರ ಮತ್ತು ಮಾಲಿನ್ಯ ನಿಯಂತ್ರಣ ಮಂಡಳಿ/ ಇತರೆ ಸಂಬಂಧಿಸಿದ ಇಲಾಖೆ, ಸಂಸ್ಥೆಗಳ ಪೂರ್ವಾನುಮತಿ ಪಡೆಯತಕ್ಕದ್ದು.

5 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 2047**

## ಇಂಧನ ಸಚಿವಾಲಯ

**ವಿಷಯ:** ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್. ಇವರಿಗೆ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-793/2011–12/510 ದಿನಾಂಕ: 13/15.02.2012.
2. ದಿನಾಂಕ: 26.04.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಪಟ್ಟದ್ಕಲ್ ಗ್ರಾಮದಲ್ಲಿ ಮಲಪ್ರಭಾ ನದಿಗೆ ಅಡ್ಡಲಾಗಿ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಸಭೆಯಲ್ಲಿ ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್. ಇವರಿಗೆ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಅರಣ್ಯ ಇಲಾಖೆಯ ಅನುಮತಿ ಪಡೆಯುವ ಷರತ್ತಿಗೊಳಪಟ್ಟು ಅನುಮತಿ ನೀಡಲು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 200 ಎನ್‌ಸಿಇ 2012, ಬೆಂಗಳೂರು, ದಿನಾಂಕ: 11.07.2012.**

ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್. ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಪಟ್ಟದ್ಕಲ್ ಗ್ರಾಮದಲ್ಲಿ ಮಲಪ್ರಭಾ ನದಿಗೆ ಅಡ್ಡಲಾಗಿ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಭೌಗೋಳಿಕ ಸ್ಥಳದಲ್ಲಿ ಸ್ಥಾಪಿಸಲು ಕೆಳಕಂಡ ಷರತ್ತಿಗೊಳಪಟ್ಟು **ಸರ್ಕಾರದ ಅನುಮೋದನೆ ನೀಡಲಾಗಿದೆ:–**

| | Latitude | Longitude |
|---|---|---|
| Weir | 15°57'48'' | 75°49'15'' |
| Power House | At the toe of the weir. | |
| FRL – 516 Mtr<br>TWL-509.5 Mtr | | |

1 ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

3 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 435 ಎನ್‌ಸಿಇ 2011 ದಿನಾಂಕ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

4 ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕಣ ಶುಲ್ಕವನ್ನು ತುಂಬುವುದು.

5 ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7 ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯ ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12 ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

13 ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ / ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

14 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 2050**

## ಇಂಧನ ಸಚಿವಾಲಯ

**ವಿಷಯ:** ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್. ಇವರಿಗೆ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಆಸಂಗಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-795/2011–12/512 ದಿನಾಂಕ: 06/15.02.2012.
2. ದಿನಾಂಕ: 26.04.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್. ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಆಸಂಗಿ ಗ್ರಾಮದಲ್ಲಿ ಮಲಪ್ರಭಾ ನದಿಗೆ ಅಡ್ಡಲಾಗಿ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಆಸಂಗಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಸಭೆಯಲ್ಲಿ ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್. ಇವರಿಗೆ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಅರಣ್ಯ ಇಲಾಖೆಯ ಅನುಮತಿ ಪಡೆಯುವ ಷರತ್ತಿಗೊಳಪಟ್ಟು ಅನುಮತಿ ನೀಡಲು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 199 ಎನ್‌ಸಿಇ 2012, ಬೆಂಗಳೂರು, ದಿನಾಂಕ: 11.07.2012.**

ಮೆ: ಎವರ್ ಗ್ರೀನ್ ಎನರ್ಜಿ ಎಂಟರ್ ಪ್ರೈಸಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್. ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಆಸಂಗಿ ಗ್ರಾಮದಲ್ಲಿ ಮಲಪ್ರಭಾ ನದಿಗೆ ಅಡ್ಡಲಾಗಿ 1.6 ಮೆಗಾ ವ್ಯಾಟ್ ಸಾಮರ್ಥ್ಯದ ಆಸಂಗಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಭೌಗೋಳಿಕ ಸ್ಥಳದಲ್ಲಿ ಸ್ಥಾಪಿಸಲು ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ :–

| | Latitude | Longitude |
|---|---|---|
| Weir | 16º02’01’’ | 75º50’44’’ |
| Power House | At the toe of the weir. | |
| FRL – 496.5 Mtr<br>TWL-490 Mtr | | |

1 ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

3 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 435 ಎನ್‌ಸಿಇ 2011 ದಿನಾಂಕ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

4 ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

5 ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7 ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ

11 ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12 ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

13 ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ / ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

14 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 2049**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.8 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಎ.ಬಿ. ಮಲ್ಲಿಕಾರ್ಜುನ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ABM-0.8/(VWILLP-200 MW) 2012/1758 ದಿನಾಂಕ: 26/27.06.2012

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1’55”- 15°8’0” N<br>**Longitude**: 75°08’56”- 75°14’23” E<br>**Ridge peaks:** 701, 714, 682, 717, 713, 698, 733, 722m AMSL. | 19.80 MW | 59.40 MW | 79.20 MW<br>(99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>**Latitude**: 15°0’0”- 15°10’30” N<br>**Longitude**: 75°15’0”- 75°28’19” E<br>**Ridge peaks:** 681, 671, 676, 638, 624, 698, 664, 701, 720, 663, 682, 664, 708, 665, 664m AMSL. | 49.83 (part capacity of 67.65 MW) | 70.97 | 120.80 MW<br>(151 x 800 KW) |

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಎ.ಬಿ. ಮಲ್ಲಿಕಾರ್ಜುನ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು 30.09.2012ರೊಳಗೆ ಅನುಷ್ಠಾನಗೊಳಿಸುವ, ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಅಡಿಯಲ್ಲಿ ಮೂರನೆ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 186 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.07.2012.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **0.8 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಎ.ಬಿ. ಮಲ್ಲಿಕಾರ್ಜುನ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**Land details of the Project**

| Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Kongapura | Shiggaon/Haveri | 0.80 | 41/1 | 136 | 1.1 | Lat: 15°2'48.74" N<br>Long: 75°16'7.51'' E |

1 **ಮೆ:: ಎ.ಬಿ. ಮಲ್ಲಿಕಾರ್ಜುನ** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಎ.ಬಿ. ಮಲ್ಲಿಕಾರ್ಜುನ** ರವರು ವೀಲಿಂಗ್ ಮತ್ತು ಬ್ಯಾಂಕಿಂಗ್ ಸಂಬಂಧಿಸಿದ ಎಸ್ಕಾಂ/ಕೆಪಿಟಿಸಿಎಲ್‌ನೊಂದಿಗೆ ಮಾಡಿಕೊಳ್ಳಲು ಅನುಮೋದಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 30.9.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 2048**

## ಇಂಧನ ಸಚಿವಾಲಯ

**ವಿಷಯ:** ಮೆ:: ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ರವರ ಸಹ–ವಿದ್ಯುತ್ ಘಕಟದ ಸಾಮರ್ಥ್ಯವನ್ನು 28 ಮೆ.ವ್ಯಾ. (ಗ್ರಾಸ್) ಮತ್ತು 16 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ನಿಂದ 28 ಮೆ.ವ್ಯಾ. (ಗ್ರಾಸ್) ಹಾಗೂ 30 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಪತ್ರ ಸಂಖ್ಯೆ ಡಿಇ 81 ಎನ್‌ಸಿಇ 2001 ದಿನಾಂಕ :10.8.2001.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 04/MPSSKN/F-41/2011–12/948 ದಿನಾಂಕ: 16/26.3.2012 ಹಾಗೂ ಬೈಯೋ&ಕೋಜೆನ್/ಎನ್‌ಬಿಹೆಚ್/ಎಫ್–41/2012–13/1632 ದಿನಾಂಕ: 04/13.6.2012.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರಿ ಪತ್ರದಲ್ಲಿ ಮೆ:: ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಕಂಪನಿಗೆ ಬೆಳಗಾವಿ ಜಿಲ್ಲೆಯ ಮುಗುಟಖಾನ ಹುಬ್ಬಳ್ಳಿ ಎಂಬಲ್ಲಿ 28 ಮೆಗಾ ವ್ಯಾಟ್ **(gross)** ಮತ್ತು 16 ಮೆಗಾ ವ್ಯಾಟ್ **(exportable)** ಸಾಮರ್ಥ್ಯದ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ಸಹ–ವಿದ್ಯುತ್ ಘಟಕದ ಹಾಲಿ 28 ಮೆ.ವ್ಯಾ. **(gross)** ಮತ್ತು 16 ಮೆ.ವ್ಯಾ. **(exportable)** ಸಾಮರ್ಥ್ಯವನ್ನು 30 ಮೆ.ವ್ಯಾ. **(gross)** ಹಾಗೂ 17.55 ಮೆ.ವ್ಯಾ. **(exportable during season)** ಮತ್ತು 20.75 ಮೆ.ವ್ಯಾ. **(exportable during off season)** ಗೆ ಹೆಚ್ಚಿಸುವ ಕುರಿತು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 140 ಎನ್‌ಸಿಇ 2012, ಬೆಂಗಳೂರು, ದಿನಾಂಕ: 11.07.2012.**

ಮೆ:: ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಇವರಿಗೆ ಬೆಳಗಾವಿ ಜಿಲ್ಲೆಯ ಮುಗುಟಖಾನ ಹುಬ್ಬಳ್ಳಿ ಎಂಬಲ್ಲಿ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕ ಸ್ಥಾಪಿಸಲು ನೀಡಿರುವ ನಿರಾಕ್ಷೇಪಣೆಯನ್ನು 28 ಮೆ.ವ್ಯಾ. **(gross)** ಮತ್ತು 16 ಮೆ.ವ್ಯಾ. **(exportable)** ನಿಂದ 30 ಮೆ.ವ್ಯಾ. **(gross)** 17.55 ಮೆ.ವ್ಯಾ. **(exportable during season)** ಮತ್ತು 20.75 ಮೆ.ವ್ಯಾ. **(exportable during off season)** ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 2051**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ, ಹುಮ್ನಾಬಾದ್ ತಾಲ್ಲೂಕಿನ ಜಲಸಂಗಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 23/06/2012ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ ಬಿಜೆಪಿ/ಭೂಸ್ವಾಪ್ರ/2012–13/3617.

**ಪ್ರಸ್ತಾವನೆ:**

ಬೀದರ್ ಜಿಲ್ಲೆ, ಹುಮ್ನಾಬಾದ್ ತಾಲ್ಲೂಕಿನ ಜಲಸಂಗಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಲಸಂಗಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ.

- ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 10/02/1983 ರಂದು ಹೊರಡಿಸಲಾಗಿದೆ.
- ಭೂಸ್ವಾಧೀನಾಧಿಕಾರಿಗಳು ಐತೀರ್ಪು ರಚಿಸಿದ ದಿನಾಂಕ 13/07/1984

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಬಸವಕಲ್ಯಾಣ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:454/93ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ: 07/08/06ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.30,000/–ಗಳ ಭೂಮೌಲ್ಯವನ್ನು ನಿಗದಿಪಡಿಸಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 315 ಎಲ್‌ಸಿಜಿ 2009, ದಿನಾಂಕ 31/01/2009ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಜಲಸಂಗಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 454/93 | 138/2B | 2–22 | 4,40,402–00 |
| | ಒಟ್ಟು | | | **4,40,402–00** |

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 104 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 31ನೇ ಜುಲೈ 2012.**

ಬೀದರ್ ಜಿಲ್ಲೆ, ಹುಮ್ನಾಬಾದ್ ತಾಲ್ಲೂಕಿನ ಜಲಸಂಗಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಲಸಂಗಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ.4,40,402/–ಗಳನ್ನು (ನಾಲ್ಕು ಲಕ್ಷದ ನಲವತ್ತು ಸಾವಿರದ ನಾನೂರ ಎರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ.4,40,402/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 1855**

## ಒಳಾಡಳಿತ ಸಚಿವಾಲಯ

**ವಿಷಯ:** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಲು ಶ್ರೀ ಜಿ.ಕೆ.ಬೇಕಲ್ ಇವರನ್ನು ನೇಮಿಸಿ ಶುಲ್ಕ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 09/03/2012.
2. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 12 ಪಿಸಿಇ 2012 ದಿನಾಂಕ 20/06/2012.
3. ದಿನಾಂಕ: 13/08/2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012
4. ಶ್ರೀ ಜಿ.ಕೆ.ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು ಇವರ ಮನವಿ ದಿನಾಂಕ: 04/06/2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ದಿನಾಂಕ 02/03/2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ಆಯೋಗವನ್ನು ನೇಮಿಸಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಶ್ರೀ ಜಿ.ಕೆ.ಬೇಕಲ್, ವಕೀಲರು ಮತ್ತು ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರನ್ನು ಪೊಲೀಸರ ಪರವಾಗಿ ಆಯೋಗದ ಮುಂದೆ ವಾದ ಮಂಡಿಸಲು ನೇಮಕ ಮಾಡಲಾಗಿದೆ.

ಮೇಲೆ ಓದಲಾದ (3)ರ ಶ್ರೀ ಜಿ.ಕೆ.ಬೇಕಲ್, ವಕೀಲರು ಹಾಗೂ ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಅವರನ್ನು ಪೊಲೀಸರ ಪರವಾಗಿ ವಾದಿಸಲು ನೇಮಿಸಿರುವುದನ್ನು ಭಾಗಶ: ಮಾರ್ಪಡಿಸಿ ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ನೇಮಕ ಮಾಡಲಾಗಿದೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಶ್ರೀ ಜಿ.ಕೆ.ಬೇಕಲ್‌ರವರು ಸರ್ಕಾರವು ನಿಯಮಾನುಸಾರ ನಿಗಧಿಗೊಳಿಸುವ ಸಂಭಾವನೆಗೆ ತಮ್ಮ ಒಪ್ಪಿಗೆಯನ್ನು ನೀಡಿರುತ್ತಾರೆ. ಸರ್ಕಾರವು ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 11 ಪಿಸಿಇ 2012 ಬೆಂಗಳೂರು ದಿನಾಂಕ: 13/08/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ.ಬೇಕಲ್, ವಕೀಲರು ಹಾಗೂ ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ನಿಗಧಿಪಡಿಸಿದೆ.

| ಕ್ರ ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1 | Reading Fee | ₹.1,00,000-00 |
| 2 | Effective hearing per day | ₹.010,000-00 |
| 3 | Non-effective hearing per day | ₹.006,000-00 |
| 4 | TA/DA | As applicable to Gazetted Group-A under the KCSRs |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2070–11–105–0–02–059 ವಿಶೇಷ ತನಿಖಾ ಆಯೋಗಗಳ ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

ಸದರಿ ವಕೀಲರು ವಿಚಾರಣಾ ಆಯೋಗದ ಮುಂದೆ ವಾದಿಸಲು ನಿಗಧಿಪಡಿಸಿರುವ ದಿನಾಂಕವನ್ನು ಅದಷ್ಟು ಅಡ್ಜರ್ನ್‌ಮೆಂಟ್ ಆಗದಂತೆ ವಿಚಾರಣಾ ಆಯೋಗವು ನಿಗಧಿಪಡಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ:27/01/2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 1926**

## ಒಳಾಡಳಿತ ಸಚಿವಾಲಯ

**ವಿಷಯ:** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಪರವಾಗಿ ವಾದ ಮಂಡಿಸಲು ಶ್ರೀ ಎಂ.ಸೀತಾರಾಮ ಶೆಟ್ಟಿ ಹಿರಿಯ ವಕೀಲರು, ಶ್ರೀ ಗೌತಮಾದಿತ್ಯ ಶ್ರೀಧರ ಕಿರಿಯ ವಕೀಲರು **ಇವರುಗಳಿಗೆ ಸಂಭಾವನೆ ನಿಗಧಿಪಡಿಸುವ ಬಗ್ಗೆ.**

**ಓದಲಾಗಿದೆ:–**

1. ಸರ್ಕಾರದ ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 09/03/2012.
2. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 11 ಪಿಸಿಇ 2012 ದಿನಾಂಕ 28/05/2012.
3. ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ಆಯೋಗದ ಪತ್ರ ಸಂಖ್ಯೆ:ಆರ್‌ಜಿವಿಸಿ.124/2012 ದಿ:13/07/2012

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ದಿನಾಂಕ 02/03/2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ಆಯೋಗವನ್ನು ನೇಮಿಸಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ಆಯೋಗದ ಕಾರ್ಯಕಲಾಪಗಳಲ್ಲಿ ಸಹಕರಿಸಲು ಶ್ರೀ ಎಂ.ಸೀತಾರಾಮ ಶೆಟ್ಟಿ ಹಿರಿಯ ವಕೀಲರು, ಮಂಗಳೂರು ಹಾಗೂ ಶ್ರೀ ಗೌತಮಾದಿತ್ಯ ಶ್ರೀಧರ, ಕಿರಿಯ ವಕೀಲರು ಬೆಂಗಳೂರು **ಇವರುಗಳನ್ನು ಆಯೋಗದ ವಕೀಲರುಗಳಾಗಿ ನೇಮಕ ಮಾಡಲಾಗಿದೆ.**

ಮೇಲೆ ಓದಲಾದ (3)ರ ಪತ್ರದೊಂದಿಗೆ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಅಧ್ಯಕ್ಷರು ಶ್ರೀ ಎಂ.ಸೀತಾರಾಮಶೆಟ್ಟಿ, ಹಿರಿಯ ವಕೀಲರು, ಮಂಗಳೂರು ಅವರ ಪತ್ರವನ್ನು ಸರ್ಕಾರಕ್ಕೆ ಕಳುಹಿಸಿ, ಶ್ರೀ ಎಂ.ಸೀತಾರಾಮ ಶೆಟ್ಟಿ ಹಿರಿಯ ವಕೀಲರು, ಮಂಗಳೂರು ಹಾಗೂ ಶ್ರೀ ಗೌತಮಾದಿತ್ಯ ಶ್ರೀಧರ, ಕಿರಿಯ ವಕೀಲರು ಇವರುಗಳ ಸಂಭಾವನೆಯನ್ನು ನಿಗಧಿಪಡಿಸುವಂತೆ ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 11 ಪಿಸಿಇ 2012 ಬೆಂಗಳೂರು ದಿನಾಂಕ: 13/08/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಪರವಾಗಿ ವಾದ ಮಂಡಿಸುವ ಶ್ರೀ ಎಂ.ಸೀತಾರಾಮ ಶೆಟ್ಟಿ, ಹಿರಿಯ ವಕೀಲರು ಮತ್ತು ಶ್ರೀ ಗೌತಮಾದಿತ್ಯ ಶ್ರೀಧರ ಕಿರಿಯ ವಕೀಲರು ಇವರುಗಳಿಗೆ ಈ ಕೆಳಕಂಡಂತೆ ಶುಲ್ಕ ಸಂಭಾವನೆಯನ್ನು ನಿಗಧಿಪಡಿಸಿ ಸದರಿ ಆಯೋಗಕ್ಕೆ ಬಿಡುಗಡೆ ಮಾಡಿದ ಹಣದಲ್ಲಿ ಪಾವತಿಸಲು ಹಾಗೂ ಸೌಲಭ್ಯಗಳನ್ನು ಒದಗಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಶ್ರೀ ಸೀತಾರಾಮಶೆಟ್ಟಿ, ಹಿರಿಯ ವಕೀಲರು ಇವರಿಗೆ**

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1 | Reading Fee | ₹.1,00,000-00 |
| 2 | Effective hearing per day | ₹..010,000-00 |
| 3 | Non-effective hearing per day | ₹. 006,000-00 |
| 4 | TA/DA | As applicable to Gazetted Group-A under the KCSRs |

**ಶ್ರೀ ಗೌತಮಾದಿತ್ಯ ಶ್ರೀಧರ, ಕಿರಿಯ ವಕೀಲರು ಇವರಿಗೆ**

| | | | |
|---|---|---|---|
| 1) | Reading Fee | - | ₹. 25,000.00 |
| 2) | Remuneration per sitting day | - | ₹. 02,500.00 |

ಸದರಿ ವಕೀಲರು ವಿಚಾರಣಾ ಆಯೋಗದ ಮುಂದೆ ವಾದಿಸಲು ನಿಗಧಿಪಡಿಸಿರುವ ದಿನಾಂಕವನ್ನು ಅದಷ್ಟು ಅಡ್ಜರ್ನ್‌ಮೆಂಟ್ ಆಗದಂತೆ ವಿಚಾರಣಾ ಆಯೋಗವು ನಿಗಧಿಪಡಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ:27/01/2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 2055**

## ಒಳಾಡಳಿತ ಸಚಿವಾಲಯ

**ವಿಷಯ:** ದಿನಾಂಕ: 2.3.2012 ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಹಿನ್ನೆಲೆಯಲ್ಲಿ ರಚಿಸಲಾದ ವಿಚಾರಣ ಆಯೋಗದ ಮುಂದೆ ಪೋಲೀಸರ ಪರವಾಗಿ ವಾದಮಂಡಿಸಲು ಶ್ರೀ ತಿಮ್ಮರಾಯಪ್ಪ, ಹಿರಿಯ ವಕೀಲರು, ಶ್ರೀ ಹೆಚ್.ವಿ.ರಮೇಶ್, ವಕೀಲರು ಇವರುಗಳಿಗೆ ಸಂಭಾವನೆ ಪಾವತಿಸುವ ಬಗ್ಗೆ.

**ಓದಲಾಗಿದೆ:–**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 04 ಪಿಸಿಇ 2012 ದಿನಾಂಕ: 09.03.2012.
2. ಪೋಲೀಸ್ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಪಿ/ಅಪರಾಧ/ಇಂಟ್/66/2012 ದಿನಾಂಕ:07/06/2012
3. ದಿನಾಂಕ:13/08/2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012
4. ಶ್ರೀ ತಿಮ್ಮರಾಯಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು, ಬೆಂಗಳೂರು ಇವರ ಪತ್ರ ದಿನಾಂಕ:27/07/2012.

**ಪ್ರಸ್ತಾವನೆ :–**

ಮೇಲೆ ಓದಲಾದ (1) ರ ಆದೇಶದಲ್ಲಿ ದಿನಾಂಕ: 02.03.2012 ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯನ್ನು ಕೂಲಂಕುಷವಾಗಿ ಪರಿಶೀಲಿಸಲು ನ್ಯಾಯಮೂರ್ತಿ ಶ್ರೀ.ಆರ್.ಜಿ. ವೈದ್ಯನಾಥ ಆಯೋಗವನ್ನು ನೇಮಿಸಲಾಗಿದೆ.

ಮೇಲೆ ಓದಲಾದ (2) ರಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಬೆಂಗಳೂರು ಆಯೋಗದ ಮುಂದೆ **ಪೊಲೀಸರ ಪರವಾಗಿ ವಾದವನ್ನು ಮಂಡಿಸಲು** ಶ್ರೀ.ತಿಮ್ಮರಾಯಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು, ಬೆಂಗಳೂರು ಇವರನ್ನು ನೇಮಿಸಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ (3) ರಲ್ಲಿ ಶ್ರೀ ತಿಮ್ಮರಾಯಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು, ಬೆಂಗಳೂರು ಹಾಗೂ ಶ್ರೀ ಹೆಚ್.ವಿ ರಮೇಶ್, ವಕೀಲರು ಬೆಂಗಳೂರು ಇವರಗಳನ್ನು ಪೋಲೀಸರ **ಪರವಾಗಿ ಆಯೋಗದ ಮುಂದೆ ವಾದ ಮಂಡಿಸಲು ನೇಮಿಸಿದೆ.**

ಮೇಲೆ ಓದಲಾದ (4) ರ ಪತ್ರದಲ್ಲಿ ಶ್ರೀ ತಿಮ್ಮರಾಯಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು ಪೊಲೀಸರ ಪರವಾಗಿ ಆಯೋಗದ ಮುಂದೆ ವಾದಮಂಡಿಸಲು ಒಪ್ಪಿ ತಮ್ಮ ಒಪ್ಪಿಗೆಯನ್ನು ಲಿಖಿತ ಮೂಲಕ ತಿಳಿಸಿ ತಮಗೆ ಹಾಗೂ ವಕೀಲರಾದ ಶ್ರೀ ಹೆಚ್.ವಿ.ರಮೇಶ್ ರವರಿಗೆ ಶುಲ್ಕವನ್ನು ನಿಗಧಿಗೊಳಿಸಲು ಕೋರಿದ್ದಾರೆ. ಸದರಿ ವಿಷಯವನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ,

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 11 ಪಿಸಿಇ 2012, ಬೆಂಗಳೂರು ದಿನಾಂಕ : 13/08/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ತಿಮ್ಮರಾಯಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು ಮತ್ತು ಶ್ರೀ ಹೆಚ್.ವಿ.ರಮೇಶ್, ವಕೀಲರು ಬೆಂಗಳೂರು ಇವರುಗಳಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಪಾವತಿಸಲು ಸರ್ಕಾರ ನಿರ್ಧರಿಸಿದೆ.

**ಶ್ರೀ ತಿಮ್ಮರಾಯಪ್ಪ,ಹಿರಿಯ ವಕೀಲರು ಇವರಿಗೆ.**

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1 | Reading Fee | ₹.1,00,000-00 |
| 2 | Effective hearing per day | ₹..010,000-00 |
| 3 | Non-effective hearing per day | ₹..006,000-00 |
| 4 | TA/DA | As applicable to Gazetted Group-A under the KCSRs |

**ಶ್ರೀ ಹೆಚ್.ವಿ.ರಮೇಶ್, ಕಿರಿಯ ವಕೀಲರು ಇವರಿಗೆ**

| | | | |
|---|---|---|---|
| 1) | Reading Fee | - | ₹. 25,000.00 |
| 2) | Remuneration per sitting day | - | ₹. 02,500.00 |

ಪ್ರಸ್ತಾಪಿತ ಸಂಭಾವನೆಯನ್ನು ಲೆಕ್ಕ ಶೀರ್ಷಿಕೆ 2055-00-108-0-01-05ರಡಿಯಲ್ಲಿ ಭರಿಸತಕ್ಕದ್ದು.

ಸದರಿ ವಕೀಲರು ವಿಚಾರಣಾ ಆಯೋಗದ ಮುಂದೆ ವಾದಿಸಲು ನಿಗಧಿಪಡಿಸಿರುವ ದಿನಾಂಕವನ್ನು ಅದಷ್ಟು ಅಡ್ಜರ್ನ್‌ಮೆಂಟ್ ಆಗದಂತೆ ವಿಚಾರಣಾ ಆಯೋಗವು ನಿಗಧಿಪಡಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ:27/01/2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 2056**

## ಒಳಾಡಳಿತ ಸಚಿವಾಲಯ

**ವಿಷಯ:** ದಿನಾಂಕ 02.03.2012ರಂದು ಬೆಂಗಳೂರು ನಗರದ ಸಿಟಿ ಸಿವಿಲ್ ಕೋರ್ಟ್ ಆವರಣದಲ್ಲಿ ನಡೆದ ಗಲಭೆಯಲ್ಲಿ ಹಾನಿಗೊಳಗಾದವರಿಗೆ ನಷ್ಟ ಪರಿಹಾರವನ್ನು ವಿತರಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ**

1. ಜಿಲ್ಲಾಧಿಕಾರಿ, ಬೆಂಗಳೂರು ಅವರ ದಿನಾಂಕ 23.04.2012ರ ಪತ್ರ ಸಂಖ್ಯೆ.ಎಂಎಜಿ[1]/ಸಿಆರ್4/2011-12
2. ದಿನಾಂಕ 06.06.2012ರ ಸಮಸಂಖ್ಯೆಯ ಸರ್ಕಾರಿ ಆದೇಶ
3. ಜಿಲ್ಲಾಧಿಕಾರಿ, ಬೆಂಗಳೂರು ಅವರ ದಿನಾಂಕ 27.06.2012ರ ಪತ್ರ ಸಂಖ್ಯೆ.ಎಂಎಜಿ[1]/ಸಿಆರ್4/2011-12

**ಪ್ರಸ್ತಾವನೆ**

ದಿನಾಂಕ 02.03.2012ರಂದು ಬೆಂಗಳೂರು ನಗರದ ಸಿಟಿ ಸಿವಿಲ್ ಕೋರ್ಟ್ ಆವರಣದಲ್ಲಿ ವಕೀಲರು, ಮೀಡಿಯಾ ಹಾಗೂ ಪೊಲೀಸ್ ಸಿಬ್ಬಂದಿ ನಡುವೆ ನಡೆದ ಗಲಭೆ ಸಂದರ್ಭದಲ್ಲಿ ವಾಹನಗಳು, ಚರಾಸ್ತಿಗಳಿಗೆ ಆದ ಹಾನಿಗೆ ಪರಿಹಾರ ಮಂಜೂರು ಮಾಡಲು ರೂ.20ಲಕ್ಷಗಳ [ರೂಪಾಯಿಗಳು ಇಪ್ಪತ್ತು ಲಕ್ಷಗಳು ಮಾತ್ರ] ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ [1]ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ, ಬೆಂಗಳೂರು ಅವರ ಕೋರಿದ್ದರ ಹಿನ್ನೆಲೆಯಲ್ಲಿ, ಮೇಲೆ ಓದಲಾದ [2]ರ ಸರ್ಕಾರಿ ಆದೇಶದಲ್ಲಿ ರೂ.20/- ಲಕ್ಷಗಳನ್ನು [ರೂಪಾಯಿಗಳು ಇಪ್ಪತ್ತು ಲಕ್ಷಗಳು ಮಾತ್ರ] ಬಿಡುಗಡೆ ಮಾಡಲಾಗಿತ್ತು. ಮೇಲೆ ಓದಲಾದ [3]ರ ಪತ್ರದಲ್ಲಿ ಹಲವಾರು ದ್ವಿಚಕ್ರ ವಾಹನಗಳು/ ಕಾರುಗಳು/ನೋಟರಿಯವರ ಅಂಗಡಿ ಮುಟ್ಟುಗಳು ಅಲ್ಲದೇ ಕೆಲವು ಕೋರ್ಟಿನ ಕೆಲಸಕ್ಕೆ ಬಂದಿದ್ದ ಸಾರ್ವಜನಿಕರ ವಾಹನಗಳು ಅಗ್ನಿಸ್ಪರ್ಶದಿಂದ ಸುಟ್ಟು ಭಸ್ಮವಾಗಿದ್ದು, ಪೊಲೀಸರು ಲಾಟಿ ಚಾರ್ಜ್ ಅಥವಾ ಕಲ್ಲಿನೇಟಿನಿಂದ ಗಾಯಗೊಂಡಿರುವ ಕೆಲವು ವಕೀಲರು, ಸಾರ್ವಜನಿಕರು ತಾವು ಮಾಡಿರುವ ಚಿಕಿತ್ಸಾ ವೆಚ್ಚವನ್ನು ಪರಿಹಾರವಾಗಿ ನೀಡುವಂತೆ ಕೋರಿರುವ ಹಿನ್ನೆಲೆಯಲ್ಲಿ ಹಾಗೂ ದಿನಾಂಕ 26.06.2012ರ ಅಂತ್ಯಕ್ಕೆ ಇನ್ನೂ ಪ್ರಕರಣಗಳು ಬಾಕಿಯಿದ್ದು ಮತ್ತು ಸ್ವೀಕೃತವಾಗುತ್ತಿದ್ದು, ಸದರಿ ಸಂತ್ರಸ್ಥರಿಗೆ ಪರಿಹಾರ ಪಾವತಿಸುವ ಸಲುವಾಗಿ ಮತ್ತೊಮ್ಮೆ ರೂ.20/- ಲಕ್ಷಗಳ[ರೂಪಾಯಿಗಳು ಇಪ್ಪತ್ತು ಲಕ್ಷಗಳು ಮಾತ್ರ] ಅನುದಾನವನ್ನು ಬಿಡುಗಡೆಗೊಳಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ 10 ಸಿಆರ್‌ಆರ್ 2012, ಬೆಂಗಳೂರು ದಿನಾಂಕ: 27/07/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ 02.03.2012ರಂದು ಬೆಂಗಳೂರು ನಗರದ ಸಿಟಿ ಸಿವಿಲ್ ಕೋರ್ಟ್ ಆವರಣದಲ್ಲಿ ವಕೀಲರು, ಮೀಡಿಯಾ ಹಾಗೂ ಪೊಲೀಸ್ ಸಿಬ್ಬಂದಿ ನಡುವೆ ನಡೆದ ಗಲಭೆ ಸಂದರ್ಭದಲ್ಲಿ ವಾಹನಗಳು, ಚರಾಸ್ತಿಗಳಿಗೆ ಆದ ಹಾನಿಗೆ ಪರಿಹಾರ ಮಂಜೂರು ಮಾಡಲು ರೂ.20ಲಕ್ಷಗಳ [ರೂಪಾಯಿಗಳು ಇಪ್ಪತ್ತು ಲಕ್ಷಗಳು ಮಾತ್ರ]ಗಳನ್ನು ಲೆಕ್ಕಶೀರ್ಷಿಕೆ **"2235-60-300-3-01-100 Relief to persons affected by Riots - Financial assistance/Relief"** ರಡಿ ಅನುದಾನವನ್ನು ಸರ್ಕಾರವು ಬಿಡುಗಡೆ ಮಾಡಲಾಗಿದೆ.

2. ಈ ಅನುದಾನವನ್ನು ನಿಗಧಿತ ಉದ್ದೇಶಕ್ಕೆ ಮಾತ್ರ ಬಳಸತಕ್ಕದ್ದು.

3. ಈ ಅನುದಾನವನ್ನು ಬಳಸಿಕೊಂಡ ಬಗ್ಗೆ ಬಳಕೆ ಪ್ರಮಾಣಪತ್ರವನ್ನು ತಪ್ಪದೇ ಸರ್ಕಾರಕ್ಕೆ ಕಳುಹಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 24.07.2012ರ ಟಿಪ್ಪಣಿ ಸಂಖ್ಯೆ.ಆಇ 256 ವೆಚ್ಚ–11/2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 1909**

## ಒಳಾಡಳಿತ ಸಚಿವಾಲಯ

**ವಿಷಯ:** ದಿನಾಂಕ 02.03.2012ರಂದು ಬೆಂಗಳೂರು ನಗರದ ಸಿಟಿ ಸಿವಿಲ್ ಕೋರ್ಟ್ ಆವರಣದಲ್ಲಿ ನಡೆದ ಗಲಭೆಯಲ್ಲಿ ಹಾನಿಗೊಳಗಾದವರಿಗೆ ನಷ್ಟ ಪರಿಹಾರವನ್ನು ವಿತರಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ 10 ಸಿಆರ್‌ಆರ್ 2012, ಬೆಂಗಳೂರು ದಿನಾಂಕ:01/08/2012**

**ತಿದ್ದುಪಡಿ ಆದೇಶ**

ದಿನಾಂಕ 27.07.2012ರ ಸಮಸಂಖ್ಯೆಯ ಆದೇಶದಲ್ಲಿ ಲೆಕ್ಕ ಶೀರ್ಷಿಕೆ "2235–60–300–3–01–100 Relief to persons affected by Riots - Financial assistance/Relief"ರ ಬದಲಾಗಿ ಲೆಕ್ಕ ಶೀರ್ಷಿಕೆ **"2235–60–200–3–01–100 Relief to persons affected by Riots - Financial assistance/Relief**"ರಡಿ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 1910**

## ಒಳಾಡಳಿತ ಸಚಿವಾಲಯ

**ವಿಷಯ:** ನ್ಯಾಯಮೂರ್ತಿ ಶ್ರೀ ಬಿ.ಕೆ.ಸೋಮಶೇಖರ್ ವಿಚಾರಣಾ ಆಯೋಗದ ಬಾಕಿ ದೂರವಾಣಿ ಬಿಲ್ಲುಗಳ ವೆಚ್ಚ ರೂ.49,803/–ಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ: 1)** ಅಧಿಸೂಚನೆ ಸಂಖ್ಯೆ: ಒಇ 08 ಪಿಸಿಇ 2008, ದಿನಾಂಕ:19/09/2008

**2)** ಅಧಿಸೂಚನೆ ಸಂಖ್ಯೆ: ಒಇ 13 ಪಿಸಿಇ 2011, ದಿನಾಂಕ:15/03/2011

**3)** ನ್ಯಾಯಮೂರ್ತಿ ಶ್ರೀ ಬಿ.ಕೆ.ಸೋಮಶೇಖರ್ ವಿಚಾರಣಾ ಆಯೋಗದ ಪತ್ರ ದಿನಾಂಕ 10/02/2012.

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ಮತ್ತು ಇತರೆ ಜಿಲ್ಲೆಗಳಲ್ಲಿ ಚರ್ಚ್‌ಗಳ ಮೇಲೆ ನಡೆದ ದಾಳಿಯ ಕಾರಣಗಳನ್ನು ಕಂಡು ಹಿಡಿಯಲು ನ್ಯಾಯಮೂರ್ತಿ ಶ್ರೀ ಬಿ.ಕೆ.ಸೋಮಶೇಖರ್ ವಿಚಾರಣಾ ಆಯೋಗವನ್ನು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 19/09/2008ರ ಅಧಿಸೂಚನೆಯಲ್ಲಿ ರಚಿಸಲಾಗಿತ್ತು.

ನ್ಯಾಯಮೂರ್ತಿ ಶ್ರೀ ಬಿ.ಕೆ.ಸೋಮಶೇಖರ್ ವಿಚಾರಣಾ ಆಯೋಗದ ವರದಿಯನ್ನು ಸಲ್ಲಿಸಿದ ನಂತರ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆಯನ್ವಯ ದಿನಾಂಕ 31/01/2011ರಿಂದ ಆಯೋಗವನ್ನು ಸಮಾಪನಗೊಳಿಸಲಾಗಿದೆ.

ನ್ಯಾಯಮೂರ್ತಿ ಶ್ರೀ ಬಿ.ಕೆ.ಸೋಮಶೇಖರ್ ವಿಚಾರಣಾ ಆಯೋಗವು ಕ್ರಮ ಸಂಖ್ಯೆ(3) ರಲ್ಲಿ ಓದಲಾದ ದಿನಾಂಕ 10/02/2012ರಲ್ಲಿ ಸರ್ಕಾರವು ವಿಚಾರಣಾ ಆಯೋಗವನ್ನು ಸಮಾಪನಗೊಳಿಸುವ ಮುನ್ನ ಎಲ್ಲಾ ಖರ್ಚು–ವೆಚ್ಚಗಳನ್ನು ಪಾವತಿಸಿದ್ದು, ಬಾಕಿಯಿರುವ ಎರಡು ತಿಂಗಳ ದೂರವಾಣಿ ಬಿಲ್ಲುಗಳ ಮೊತ್ತ ರೂ.49,803/– ಪಾವತಿಸಬೇಕೆಂದು ಕೋರಿರುತ್ತಾರೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 8 ಪಿಸಿಇ 2008 ಬೆಂಗಳೂರು ದಿನಾಂಕ : 07/07/2012**

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ನ್ಯಾಯಮೂರ್ತಿ ಶ್ರೀ ಬಿ.ಕೆ.ಸೋಮಶೇಖರ್ ವಿಚಾರಣಾ ಆಯೋಗದ ನವೆಂಬರ್–2010 ಮತ್ತು ಡಿಸೆಂಬರ್–2010ನೇ ತಿಂಗಳ ದೂರವಾಣಿ ವೆಚ್ಚದ ಬಾಕಿ ಬಿಲ್ಲುಗಳನ್ನು ಪಾವತಿಸಲು ರೂ.49,803/– (ನಲವತ್ತೊಂಬತ್ತು ಸಾವಿರದ ಎಂಟುನೂರ ಮೂರು ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2070–11–105–0–02–059 ವಿಶೇಷ ತನಿಖಾ ಆಯೋಗಗಳ ಅಡಿಯಲ್ಲಿ ಭರಿಸತಕ್ಕದ್ದು.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ವಿತ್ತಾಧಿಕಾರಿಯನ್ನು ಪ್ರತ್ಯಾಯೋಜಿಸಲಾದ ಆದೇಶ ಸಂಖ್ಯೆ:ಎಫ್‌ಡಿ 1 ಪಿಎಫ್‌ಪಿ 96 ದಿನಾಂಕ 10/07/1996ರ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 1935**

## ಒಳಾಡಳಿತ ಸಚಿವಾಲಯ

**ವಿಷಯ:–** ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** **1)** ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 09/03/2012.

**2)** ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 09/05/2012

**3)** ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗರವರ ಪತ್ರ ಸಂಖ್ಯೆ:ಆರ್‌ಜಿವಿಸಿ ನಂ.119/2012ದಿ:23/06/2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 02/03/2012ರಂದು ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿ ನಿಧಿಗಳು ಮತ್ತು ಪೊಲೀಸರ ನಡುವೆ ನಡೆದ ಘರ್ಷಣೆಯ ಕುರಿತು ಸತ್ಯಾ ಸತ್ಯತೆಯನ್ನು ತಿಳಿದುಕೊಳ್ಳಲು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ, ನಿವೃತ್ತ ನ್ಯಾಯಾಧೀಶರು ಇವರ ನೇತೃತ್ವದಲ್ಲಿ ಏಕ ಸದಸ್ಯ ವಿಚಾರಣಾ ಆಯೋಗವನ್ನು ರಚಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದವರು ಸದರಿ ಆಯೋಗದ ಸಹಾಯಕ ಸಿಬ್ಬಂದಿಯ ವೇತನ, ಪ್ರಾಸಂಗಿಕ ಖರ್ಚು–ವೆಚ್ಚ ಹಾಗೂ ಲೇಖನ ಸಾಮಗ್ರಿಗಳು ಮತ್ತು ಇತರೆ ಸಾಮಗ್ರಿಗಳನ್ನು ಖರೀದಿಸಲು ಅನುಕೂಲವಾಗುವಂತೆ ರೂ.15,00,000/– (ರೂಪಾಯಿ ಹದಿನೈದು ಲಕ್ಷಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲಾಗಿತ್ತು. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗ ಅವರು ಆಯೋಗವು ಜುಲೈ–2012ರಿಂದ ಸಾರ್ವಜನಿಕರಿಂದ ಅಫಿಡವಿಟ್/ಹೇಳಿಕೆಗಳನ್ನು ಬೆಂಗಳೂರು ಸಿಟಿ ಹೊರ ವಲಯದವರಿಂದ ಪಡೆಯಬೇಕಾಗಿದ್ದು, ಸಾಕ್ಷಿದಾರರಿಗೆ ಬಾಟ, ಪ್ರಯಾಣ ಭತ್ಯೆ ಮತ್ತು ನ್ಯಾಯಾಧೀಶರ, ಕಾರ್ಯದರ್ಶಿ ಮತ್ತು ಸಿಬ್ಬಂದಿರವರ ಸಂಬಳ ಪ್ರಾಸಂಗಿಕ ಖರ್ಚು–ವೆಚ್ಚಗಳಿಗಾಗಿ ಹೆಚ್ಚುವರಿ ರೂ.30,00,000/– (ರೂಪಾಯಿ ಮೂವತ್ತು ಲಕ್ಷಗಳು ಮಾತ್ರ) ಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012(ಭಾಗ–4) ಬೆಂಗಳೂರು ದಿನಾಂಕ 09/07/2012**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ, ವಿಚಾರಣಾ ಆಯೋಗಕ್ಕೆ ತನ್ನ ಸಹಾಯಕ ಸಿಬ್ಬಂದಿಯ ವೇತನ, ಪ್ರಾಸಂಗಿಕ ಖರ್ಚು–ವೆಚ್ಚ ಹಾಗೂ ಲೇಖನ ಸಾಮಗ್ರಿಗಳು ಮತ್ತು ಇತರೆ ಸಾಮಗ್ರಿಗಳನ್ನು ಖರೀದಿಸಲು ಅನುಕೂಲವಾಗುವಂತೆ 2012–2013ನೇ ಸಾಲಿನ ಆರ್ಥಿಕ ವರ್ಷಕ್ಕೆ ಸಂಬಂಧಿಸಿದಂತೆ **ರೂ.15,00,000/–(ರೂಪಾಯಿ ಹದಿನೈದು ಲಕ್ಷಗಳು ಮಾತ್ರ)**ಗಳನ್ನು ಲೆಕ್ಕ ಶೀರ್ಷಿಕೆ "**2070–00–105–0–02–059 ಇತರ ವಿಚಾರಣಾ ಆಯೋಗ** " ಅಡಿಯಲ್ಲಿ ಭರಿಸುವಂತೆ ಹೆಚ್ಚುವರಿ ಹಣವನ್ನು ಬಿಡುಗಡೆ ಮಾಡಲಾಗಿದೆ.

ಸದರಿ ಆಯೋಗದಲ್ಲಿ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸುವ ಅಧಿಕಾರಿಯನ್ನು ಹಣವನ್ನು ಹಿಂತೆಗೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ಸಹ ನೇಮಿಸಿದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10/07/1996ರಲ್ಲಿ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್. ವೈ.ಕೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 1884**

## ಒಳಾಡಳಿತ ಸಚಿವಾಲಯ

**ವಿಷಯ:** ಬೆಂಗಳೂರು ನಗರದ ಮಕ್ಕಳ ವಿಶೇಷ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರ ಮತ್ತು ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ:ಲಾ 114 ಎಲ್‌ಸಿಇ 2011, ದಿನಾಂಕ:11.07.2011,
2. ಸರ್ಕಾರದ ಆದೇಶ ಸಂ:ಮಮಿ 139 ಮಭಾಬ 2011, ದಿನಾಂಕ:22.10.2011
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರಪತ್ರದ ಸಂಖ್ಯೆ:ಡಿಪಿಎನ್/ಸಿಶಾ-1/58/2007-08, ದಿನಾಂಕ: 01.12.2011

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:11.07.2011ರ ಸರ್ಕಾರದ ಆದೇಶದನ್ವಯ ಬೆಂಗಳೂರು ನಗರದಲ್ಲಿ ಮಕ್ಕಳ ವಿಶೇಷ ನ್ಯಾಯಾಲಯವು ಸ್ಥಾಪಿತವಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:22.10.2011ರ ಸರ್ಕಾರದ ಆದೇಶದನ್ವಯ ಬೆಂಗಳೂರು ನಗರದಲ್ಲಿ ಮಕ್ಕಳ ವಿಶೇಷ ನ್ಯಾಯಾಲಯವನ್ನು ಸ್ಥಾಪಿಸಲು ಹಾಗೂ ತಗಲುವ ವೆಚ್ಚವನ್ನು ಭರಿಸಲು ₹.5907674-00ಗಳ ಅನುದಾನವನ್ನು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ:01.12.2011ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆರವರು ಮೇಲೆ (2)ರಲ್ಲಿ ಓದಲಾದ ದಿನಾಂಕ:22.10.2011ರ ಸರ್ಕಾರದ ಆದೇಶದ ಅನುಬಂಧ -2 ಮತ್ತು -3ರಲ್ಲಿ ಅನುಕ್ರಮವಾಗಿ ₹.886800-00 ಮತ್ತು ₹.34150-00ಗಳ ಅನುದಾನವನ್ನು ಮಕ್ಕಳ ವಿಶೇಷ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರ ಹಾಗೂ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆಗೆ ಸಂಬಂಧಪಟ್ಟಂತೆ ಬಿಡುಗಡೆ ಮಾಡಿರುತ್ತಾರೆ. ಆದ್ದರಿಂದ, ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರ ಹಾಗೂ ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳನ್ನು ಸೃಜಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 533 ಪಿಪಿಇ 2011, ಬೆಂಗಳೂರು, ದಿನಾಂಕ: 27ನೇ ಜೂನ್ 2012.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರದಲ್ಲಿ ಸ್ಥಾಪಿತವಾಗಿರುವ ಮಕ್ಕಳ ವಿಶೇಷ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಈ ಕೆಳಕಂಡ ಒಟ್ಟು 03 ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ಅಥವಾ ಸದರಿ ನ್ಯಾಯಾಲಯವು ಅಸ್ಥಿತ್ವದಲ್ಲಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಸೃಜಿಸಿದೆ.

| ಕ್ರ.ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರಿ ಅಭಿಯೋಜಕರು | 01 |
| 2 | ಶೀಘ್ರಲಿಪಿಗಾರರು | 01 |
| 3 | ದಲಾಯತ್ | 01 |
| **ಒಟ್ಟು ಹುದ್ದೆಗಳು** | | **03** |

ಸದರಿ ಹುದ್ದೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2014-ನ್ಯಾಯಾಪರಿಪಾಲನೆ -00-114- ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು -0-02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ: ಆಇ 190 ವೆಚ್ಚ–11/2012, ದಿನಾಂಕ:01.06.2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ.ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

**ಪಿ.ಆರ್. 1924** (ಪೊಲೀಸ್ ಸೇವೆಗಳು – ಬಿ)

## ಒಳಾಡಳಿತ ಸಚಿವಾಲಯ

**ವಿಷಯ:** ಮಂಗಳೂರು ನಗರದ ಪೊಲೀಸ್ ಆಯುಕ್ತರ ಕಛೇರಿಗೆ ಹೊಂದಿಕೊಂಡಂತೆ ಕಾನೂನು ಅಧಿಕಾರಿ (ಕಿರಿಯ) ಇವರ ಹುದ್ದೆಯ ಸೃಜನೆ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂ:ಹೆಚ್‌ಡಿ 246 ಪಿಒಪಿ 2007, ದಿನಾಂಕ:25.01.2010,
2. ಸರ್ಕಾರದ ಅಧಿಸೂಚನೆ ಸಂ:ಹೆಚ್‌ಡಿ 136 ಪಿಒಪಿ 2010, ದಿನಾಂಕ:05.06.2010,
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ:ಡಿಪಿಎನ್/ಸಿಶಾ–1/237/2011–12, ದಿನಾಂಕ:16.01.2012,
4. ಸರ್ಕಾರದ ಅಧಿಸೂಚನೆ ಸಂ:ಹೆಚ್‌ಡಿ 166 ಪಿಪಿಇ 2008, ದಿನಾಂಕ: 30.01.2012

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ದಿನಾಂಕ:25.01.2010ರ ಸರ್ಕಾರದ ಆದೇಶದನ್ವಯ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಮಹಾನಗರದಲ್ಲಿ "ಮಂಗಳೂರು ಪೊಲೀಸ್ ಕಮಿಷನರೇಟ್" ಸ್ಥಾಪಿತವಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:05.06.2010ರ ಸರ್ಕಾರದ ಅಧಿಸೂಚನೆಯನ್ವಯ ಮಂಗಳೂರು ಮಹಾನಗರಕ್ಕೆ ಪೊಲೀಸ್ ಆಯುಕ್ತರನ್ನು ನೇಮಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ:16.901.2012ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆರವರು ಮೇಲೆ (1) ಓದಲಾದ ಸರ್ಕಾರದ ಆದೇಶದನ್ವಯ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಮಹಾನಗರದಲ್ಲಿ ಸ್ಥಾಪಿತವಾದ "ಮಂಗಳೂರು ಪೊಲೀಸ್ ಕಮಿಷನರೇಟ್" ಈಗಾಗಲೇ ಪೂರ್ಣ ಪ್ರಮಾಣದಲ್ಲಿ ಸುಮಾರು 17 ಪೊಲೀಸ್ ಠಾಣೆಗಳೊಂದಿಗೆ ಕಾರ್ಯಾರಂಭಗೊಂಡಿದ್ದು, ಕಾನೂನಿನ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡಲು ಇಲಾಖೆಯ ಸಹಾಯಕ ಅಭಿಯೋಗ ನಿರ್ದೇಶಕರ ಹಾಗೂ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಅವಶ್ಯಕತೆ ಇರುತ್ತದೆಂದು ವರದಿ ಮಾಡಿರುತ್ತಾರೆ. ಆದ್ದರಿಂದ, ಅವರ ಕಛೇರಿ ಹೊಂದಿಕೊಂಡಂತೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ, ಒಂದು ಶೀಘ್ರಲಿಪಿಗಾರರ ಮತ್ತು ಒಂದು ದಲಾಯತರ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 30.01.2012ರ ಸರ್ಕಾರದ ಅಧಿಸೂಚನೆಯನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ "ಸಹಾಯಕ ಅಭಿಯೋಗ ನಿರ್ದೇಶಕರ" ಹುದ್ದೆಯ ವೃಂದನಾಮವನ್ನು "ಕಾನೂನು ಅಧಿಕಾರಿ (ಕಿರಿಯ)" ಎಂದು ವೃಂದನಾಮವನ್ನು ಬದಲಾವಣೆ ಮಾಡಲಾಗಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 40 ಪಿಪಿಇ 2012, ಬೆಂಗಳೂರು, ದಿನಾಂಕ: 03ನೇ ಜುಲೈ 2012.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಮಂಗಳೂರು ನಗರದ ಪೊಲೀಸ್ ಆಯುಕ್ತರ ಕಛೇರಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಂದು ಕಾನೂನು ಅಧಿಕಾರಿ(ಕಿರಿಯ) ಇವರ ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ಅಥವಾ ಸದರಿ ಕಛೇರಿಯು ಅಸ್ಥಿತ್ವದಲ್ಲಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಸೃಜಿಸಿದೆ.

ಸದರಿ ಹುದ್ದೆಯ ಸೃಜನೆಯಿಂದಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2014–ನ್ಯಾಯಾಪರಿಪಾಲನೆ –00–114– ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು –0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ: ಆಇ 125 ವೆಚ್ಚ–11/2012, ದಿನಾಂಕ:17.05.2012 ಹಾಗೂ ಆಇ 225 ವೆಚ್ಚ–11/2012, ದಿನಾಂಕ:15.06.2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ.ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು – ಬಿ)

**ಪಿ.ಆರ್. 1933**

## ಒಳಾಡಳಿತ ಸಚಿವಾಲಯ

**ವಿಷಯ:** ಚಾಮರಾಜನಗರ ಜಿಲ್ಲೆಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಸರ್ಕಾರಿ ಅಭಿಯೋಜಕರನ್ನು ಸದರಿ ಜಿಲ್ಲಾ ಕೇಂದ್ರದ ಸಂಯುಕ್ತ ಕಛೇರಿಗೆ ಮುಖ್ಯಸ್ಥರು ಹಾಗೂ ಅಲ್ಲಿನ ಎಲ್ಲಾ ಅಭಿಯೋಜಕರ ಕಛೇರಿಗಳಿಗೆ ಜಿಲ್ಲಾ ಹಣ ಸೆಳೆಯುವ ಮತ್ತು ವೇತನ ಬಟವಾಡೆ ಅಧಿಕಾರಿ ಎಂದು ಘೋಷಿಸಿರುವ ಬಗ್ಗೆ

**ಓದಲಾಗಿದೆ:** 1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ

2. ಪತ್ರದ ಸಂಖ್ಯೆ:ಡಿಪಿಎನ್/ಸಿಶಾ–1/03/2011–12, ದಿನಾಂಕ:23.04.2011 ಸರ್ಕಾರದ ಆದೇಶ ಸಂಖ್ಯೆ: ಒಇ 187 ಪಿಪಿಇ 2011, ದಿನಾಂಕ:16.12.2011.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ:23.04.2011ರ ಪತ್ರದಲ್ಲಿ ಚಾಮರಾಜನಗರ ಜಿಲ್ಲೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಂದು ಸರ್ಕಾರಿ ಅಭಿಯೋಜಕರ, ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹಾಗೂ ಎರಡು ಸಹಾಯಕ ಸರ್ಕಾರಿ ಅಭಿಯೋಜಕರ ಹಾಗೂ ಅವರ ಕಛೇರಿಗಳಿಗೆ ಪೂರಕ ಸಿಬ್ಬಂದಿಯ ಹುದ್ದೆಗಳು ಮಂಜೂರಾಗಿರುತ್ತದೆ. ಇವರುಗಳು ಅವರವರ ಕಛೇರಿಗಳ ಮುಖ್ಯಸ್ಥರು ಹಾಗೂ ವೇತನ ಬಟವಾಡೆ ಅಧಿಕಾರಿಗಳಾಗಿ ಸಹ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಕಛೇರಿಯ ಕೆಲಸ ಕಾರ್ಯಗಳ ಹಿತದೃಷ್ಟಿಯಿಂದ ನೂತನ ಜಿಲ್ಲಾ ಕೇಂದ್ರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳನ್ನು ಮತ್ತು ಅವರ ಕಛೇರಿಯ ಪೂರಕ ಸಿಬ್ಬಂದಿ ವರ್ಗದವರನ್ನು ಸರ್ಕಾರ ಅಭಿಯೋಜಕರ ಮುಖಂಡತ್ವದ ಸಂಯುಕ್ತ ಕಛೇರಿಯ ಆಡಳಿತದ ನಿಯಂತ್ರಣಕ್ಕೆ ಒಳಪಡಿಸುವುದು ಅಗತ್ಯವಾಗಿರುತ್ತದೆ. ಹೀಗೆ ಮಾಡುವುದರಿಂದ ಸಂಯುಕ್ತ ಕಛೇರಿಯ ಮುಖ್ಯಸ್ಥರಾಗುವ ಇವರು ಕೆಲಸದ ಹಂಚಿಕೆಯ ಆದೇಶವನ್ನು ಹೊರಡಿಸಿ, ಅಧಿಕಾರಿಗಳು ಕೆಲಸ–ಕಾರ್ಯಗಳನ್ನು ಸುಗಮವಾಗಿ ನಿರ್ವಹಿಸುವಂತೆ ನೋಡಿಕೊಳ್ಳಲು ಸಾಧ್ಯವಾಗುತ್ತದೆ. ಮುಂದುವರೆದು, ಒಂದೇ ವಿಷಯಕ್ಕೆ ಸಂಬಂಧಪಟ್ಟಂತೆ 2 ಅಥವಾ 3 ಬಿಲ್ಲುಗಳನ್ನು ಮಾಡುವ ಅಥವಾ ವಹಿಗಳನ್ನು, ಕಡತಗಳನ್ನು ನಿರ್ವಹಿಸುವುದನ್ನು ತಪ್ಪಿಸಿ ಒಂದರಲ್ಲೇ ನಿರ್ವಹಿಸುವ ಹಾಗೂ ಒಂದೇ ಹಾಜರಾತಿ ವಹಿಯನ್ನು ಸಹ ನಿರ್ವಹಿಸಿ ಅದರ ನಿಯಂತ್ರಣವನ್ನು ನೋಡಿಕೊಳ್ಳಬಹುದಾಗಿದೆ. ಆದ್ದರಿಂದ, ಚಾಮರಾಜನಗರ ಜಿಲ್ಲೆಯಲ್ಲಿರುವ ಇಲಾಖೆಯ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಇವರ ಕಛೇರಿಯನ್ನು ಸಂಯುಕ್ತ ಕಛೇರಿಯೆಂದು, ಅದರ ಸರ್ಕಾರಿ ಅಭಿಯೋಜಕರನ್ನು ಕಛೇರಿಯ ಮುಖ್ಯಸ್ಥರು ಹಾಗೂ ಸದರಿ ಜಿಲ್ಲಾ ಕೇಂದ್ರದ ಅಭಿಯೋಜಕರ ಕಛೇರಿಗಳ ವೇತನ ಬಟವಾಡೆ ಅಧಿಕಾರಿಯೆಂದು ಘೋಷಿಸುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:16.12.2011ರ ಸರ್ಕಾರಿ ಆದೇಶದಲ್ಲಿ ಚಾಮರಾಜನಗರ ಜಿಲ್ಲೆಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಸರ್ಕಾರಿ ಅಭಿಯೋಜಕರ ಕಛೇರಿಯನ್ನು ಸದರಿ ಜಿಲ್ಲಾ ಕೇಂದ್ರದ ಸಂಯುಕ್ತ ಕಛೇರಿಯೆಂದು ಘೋಷಿಸಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 187 ಪಿಪಿಇ 2011, ಬೆಂಗಳೂರು, ದಿನಾಂಕ: 03ನೇ ಜುಲೈ 2012.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಚಾಮರಾಜನಗರ ಜಿಲ್ಲೆಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಇವರನ್ನು ಸದರಿ ಜಿಲ್ಲಾ ಕೇಂದ್ರದ ಸಂಯುಕ್ತ ಕಛೇರಿಗೆ ಮುಖ್ಯಸ್ಥರು ಎಂದು ಹಾಗೂ ಮಹಾಲೇಖಪಾಲರ ಪ್ರಾಧಿಕಾರ ಪಡೆಯುವ ಷರತ್ತಿಗೆ ಒಳಪಟ್ಟು, ಸದರಿ ಜಿಲ್ಲಾ ಕೇಂದ್ರದ ಎಲ್ಲಾ ಅಭಿಯೋಜಕರ ಕಛೇರಿಗಳಿಗೆ ಜಿಲ್ಲಾ ಹಣ ಸೆಳೆಯುವ ಮತ್ತು ವೇತನ ಬಟವಾಡೆ ಮಾಡುವ ಅಧಿಕಾರಿಯೆಂದು ನೇಮಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ:ಆಇ 78 ವೆಚ್ಚ–11/2012, ದಿನಾಂಕ:08.06.2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ.ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

**ಪಿ.ಆರ್. 1934** (ಪೊಲೀಸ್ ಸೇವೆಗಳು – ಬಿ)

## ಒಳಾಡಳಿತ ಸಚಿವಾಲಯ

**ವಿಷಯ:** ಕಾರವಾರ ಮತ್ತು ಕೊಪ್ಪಳದ ಎರಡನೇ ಶೀಘ್ರ ವಿಲೇವಾರಿ ನ್ಯಾಯಾಲಯಗಳ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಕ್ರಮವಾಗಿ ವೀರಾಜಪೇಟೆ ಮತ್ತು ರಾಮನಗರ ಜಿಲ್ಲೆಯ ಕನಕಪುರದ ಶೀಘ್ರ ವಿಲೇವಾರಿ ನ್ಯಾಯಾಲಯಗಳ ಸರ್ಕಾರಿ ಅಭಿಯೋಜಕರ ಕಛೇರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ: ಒಇ 32 ಪಿಪಿಇ 2004, ದಿನಾಂಕ:25.01.2005,
2) ಸರ್ಕಾರದ ಆದೇಶ ಸಂ: ಒಇ 463 ಪಿಪಿಇ 2011, ದಿನಾಂಕ:22.10.2011,
3) ಸರ್ಕಾರದ ಆದೇಶ ಸಂ: ಲಾ 98 ಎಲ್‌ಸಿಇ 2012, ದಿನಾಂಕ:16.04.2012,
4) ಸರ್ಕಾರದ ತಿದ್ದುಪಡಿ ಆದೇಶ ಸಂ: ಲಾ 98 ಎಲ್‌ಸಿಇ 2012, ದಿನಾಂಕ:18.04.2012,
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆರವರ ಪತ್ರದ ಸಂಖ್ಯೆ:ಡಿಪಿಎನ್/ ಸಿಶಾ1/24/2012–13, ದಿನಾಂಕ: 17.05.2012.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ದಿನಾಂಕ:25.01.2004ರ ಸರ್ಕಾರದ ಆದೇಶದನ್ವಯ ಕಾರವಾರದ 2ನೇ ಶೀಘ್ರ ವಿಲೇವಾರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಂದು ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಸದರಿ ತಾತ್ಕಾಲಿಕ ಹುದ್ದೆಯನ್ನು ಈವರೆಗೂ ಮುಂದುವರೆಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:22.10.2011ರ ಸರ್ಕಾರ ಆದೇಶದನ್ವಯ ಕೊಪ್ಪಳದ 2ನೇ ಶೀಘ್ರ ವಿಲೇವಾರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಂದು ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಅಥವಾ ಸದರಿ ಶೀಘ್ರ ವಿಲೇವಾರಿ ನ್ಯಾಯಾಲಯವು ಕಾರ್ಯನಿರತವಾಗಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮೊದಲ ಬಾರಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:16.04.2012ರ ಸರ್ಕಾರದ ಆದೇಶದ ಹಾಗೂ ಮೇಲೆ (4)ರಲ್ಲಿ ಓದಲಾದ ದಿನಾಂಕ: 18.04.2012ರ ಸರ್ಕಾರದ ತಿದ್ದುಪಡಿ ಆದೇಶದನ್ವಯ, ಕಾರವಾರ ಮತ್ತು ಕೊಪ್ಪಳದ ಎರಡನೇ ಶೀಘ್ರಗತಿ ನ್ಯಾಯಾಲಯಗಳನ್ನು ಅಧಿಕಾರಿ ಮತ್ತು ಪೂರಕ ಸಿಬ್ಬಂದಿಯ ಹುದ್ದೆಗಳ ಸಮೇತ ಕ್ರಮವಾಗಿ ವೀರಾಜಪೇಟೆ ಮತ್ತು ರಾಮನಗರ ಜಿಲ್ಲೆಯ ಕನಕಪುರ ಶೀಘ್ರಗತಿ ನ್ಯಾಯಾಲಯಗಳಾಗಿ ಸ್ಥಳಾಂತರಿಸಿದೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ:17.05.2012ರ ಪತ್ರದಲ್ಲಿ ನಿರ್ದೇಶಕರು ಅಭಿಯೋಗ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ಮತ್ತು (4)ರಲ್ಲಿ ಓದಲಾದ ಸರ್ಕಾರಿ ತಿದ್ದುಪಡಿ ಆದೇಶಗಳನ್ವಯ, ಕಾರವಾರ ಮತ್ತು ಕೊಪ್ಪಳದ ಎರಡನೇ ಶೀಘ್ರಗತಿ ನ್ಯಾಯಾಲಯಗಳು ಅಧಿಕಾರಿ ಮತ್ತು ಪೂರಕ ಸಿಬ್ಬಂದಿಯ ಹುದ್ದೆಗಳ ಸಮೇತ ಕ್ರಮವಾಗಿ ವೀರಾಜಪೇಟೆ ಮತ್ತು ರಾಮನಗರ ಜಿಲ್ಲೆಯ ಕನಕಪುರದ ಶೀಘ್ರಗತಿ ನ್ಯಾಯಾಲಯಗಳಾಗಿ ಸ್ಥಳಾಂತರಗೊಂಡಿರುವುದರಿಂದ ಸದರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಸೃಜನೆಯಾಗಿರುವ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಸಹ ಸ್ಥಳಾಂತರಿಸುವುದು ಅವಶ್ಯಕವಾಗಿರುತ್ತದೆ. ಸದರಿ ಎರಡೂ ಸರ್ಕಾರಿ ಅಭಿಯೋಜಕರ ಹುದ್ದೆಗಳಲ್ಲಿ ಇಲಾಖೆಯ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿಲ್ಲವಾದ್ದರಿಂದ ಹುದ್ದೆಗಳ ಸ್ಥಳಾಂತರದಿಂದ ಸರ್ಕಾರದ ಬೊಕ್ಕಸಕ್ಕೆ ಖರ್ಚು ತಗಲುವುದಿಲ್ಲ. ಆದ್ದರಿಂದ, ಕಾರವಾರ ಮತ್ತು ಕೊಪ್ಪಳದ ಎರಡನೇ ಶೀಘ್ರಗತಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತಿರುವ ಎರಡು ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಕ್ರಮವಾಗಿ ವೀರಾಜಪೇಟೆ ಮತ್ತು ರಾಮನಗರಜಿಲ್ಲೆಯ ಕನಕಪುರದ ಶೀಘ್ರಗತಿ ನ್ಯಾಯಾಲಯಗಳಿಗೆ ಸ್ಥಳಾಂತರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 266 ಪಿಪಿಇ 2012, ಬೆಂಗಳೂರು, ದಿನಾಂಕ: 10ನೇ ಜುಲೈ 2012**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಎರಡು ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರ ಕಂಡಿಕೆ(53)ರಲ್ಲಿ ಇಲಾಖಾ ಪ್ರಧಾನ/ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕಾಧಿಕಾರವನ್ನು ಚಲಾಯಿಸಿ, ಈ ಕೆಳಕಂಡಂತೆ, ಅಂಕಣ (1)ರ ನ್ಯಾಯಾಲಯಗಳಿಂದ ಅಂಕಣ (2)ರ ನ್ಯಾಯಾಲಯಗಳಿಗೆ ಸ್ಥಳಾಂತರಿಸಿದೆ.

| ಕ್ರ. ಸಂ. | ಹುದ್ದೆಯು ಇದ್ದ ಶೀಘ್ರಗತಿ ನ್ಯಾಯಾಲಯ | ಹುದ್ದೆಯನ್ನು ಸ್ಥಳಾಂತರಿಸಲಾದ ಶೀಘ್ರಗತಿ ನ್ಯಾಯಾಲಯ | ಹುದ್ದೆಗಳ ಸಂಖ್ಯೆ |
|---|---|---|---|
| (1) | (2) | (3) | (4) |
| 1 | ಕಾರವಾರ 2ನೇ ಶೀಘ್ರಗತಿ ನ್ಯಾಯಾಲಯ | ಶೀಘ್ರಗತಿ ನ್ಯಾಯಾಲಯ, ವೀರಾಜಪೇಟೆ | 01 |
| 2 | ಕೊಪ್ಪಳದ 2ನೇ ಶೀಘ್ರಗತಿ ನ್ಯಾಯಾಲಯ | ಶೀಘ್ರಗತಿ ನ್ಯಾಯಾಲಯ, ಕನಕಪುರ, ರಾಮನಗರ ಜಿಲ್ಲೆ | 01 |
| **ಒಟ್ಟು ಹುದ್ದೆಗಳು** | | | 02 |

ಸದರಿ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂ:ಆಇ 238 ವೆಚ್ಚ–11/2012, ದಿನಾಂಕ: 21.06.2012ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ.ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು – ಬಿ)

**ಪಿ.ಆರ್. 1840**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎ.ಕೆ.ಜಾಡಗೌಡ, ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ., ನ್ಯಾಯಾಲಯ, ಖಾನಾಪುರ, ಬೆಳಗಾವಿ ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬೆಳಗಾವಿ ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಸಂಬಂಧ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಕುರಿತು

**ಓದಲಾಗಿದೆ:**

1) ತನಿಖಾಧಿಕಾರಿ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿ ಇವರ ಅಂತಿಮ ವರದಿ ಸಂ:ಡಿಎಸ್‌ಪಿ/ಕಲೋ/ಬೆಳಗಾವಿ/ಅ.ವ/ಪ್ರ.ಸಂ.23/2011, ದಿನಾಂಕ:13.03.2012,
2) ಉಪ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ (ಜಿ)/ಎಲ್–84/ಸಿಆರ್ –23/2011 /ಬಿಜಿಎಂ, ದಿನಾಂಕ:12.04.2012,
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, 6ನೇ ಮಹಡಿ, ಕಾವೇರಿ ಭವನ, ಬೆಂಗಳೂರು ಇವರ ಪತ್ರದ ಸಂ:ಡಿಪಿಎನ್/ಸಿಶಾ–1ಎ/88/2011–12, ದಿನಾಂಕ:27.04.2012,
4) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪಂಚನಾಮೆ, ಸ್ವತ್ತುಗಳ ಪಟ್ಟಿ, ಪ್ರಕರಣದ ವಿಡೀಯೊ ಫ್ರೇಮ್ಸ್‌ಗಳು, ವಿಧಿವಿಜ್ಞಾನ ಪ್ರಯೋಗಾಲಯದ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಮೇಲೆ (3)ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, 6ನೇ ಮಹಡಿ, ಕಾವೇರಿ ಭವನ, ಬೆಂಗಳೂರು ಇವರ ದಿನಾಂಕ:27.04.2012ರ ಪತ್ರದಲ್ಲಿ ಶ್ರೀ ಅಶೋಕ ಕಾಡಪ್ಪ ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಖಾನಾಪುರ ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬೆಳಗಾವಿ ಇವರ ವಿರುದ್ಧದ ಬೆಳಗಾವಿಯ ಲೋಕಾಯುಕ್ತ ಪೊಲೀಸ್ ಠಾಣೆಯ ಪ್ರಕರಣ ಸಂ:23/2011ರ ಸಂಬಂಧ ಮೇಲೆ (2)ರಲ್ಲಿ ಓದಲಾದ ಉಪ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ:12.04.2012ರ ಪತ್ರದೊಡನೆ ಮೇಲೆ (1)ರಲ್ಲಿ ಓದಲಾದ ತನಿಖಾಧಿಕಾರಿಯಾದ ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿ ಇವರ ದಿನಾಂಕ: 13.03.2012ರ ಪತ್ರದ ಜೊತೆಗೆ

ತನಿಖೆಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಕಳುಹಿಸುತ್ತಾ, ಘನ ನ್ಯಾಯಾಲಯ, ಖಾನಾಪೂರ ಇವರು ಆದೇಶಸಿದ್ದರನ್ವಯ, ಶ್ರೀ ಅಶೋಕ ಕಾಡಪ್ಪ ಜಾಡಗೌಡ ಇವರ ವಿರುದ್ಧದ ಬೆಳಗಾವಿಯ ಲೋಕಾಯುಕ್ತ ಪೊಲೀಸ್ ಠಾಣೆಯ ಪ್ರಕರಣ ಸಂ:23/2011ನ್ನು ದಾಖಲಿಸಿಕೊಂಡು ನಡೆಸಿದ ತನಿಖೆಯಿಂದ ಆಪಾಧಿತರು ಕಲಂ:7, 13(1)(ಡಿ) ಸಹಕಲಂ:13(2) ಲಂಚ ಪ್ರತಿಬಂಧಕ ಕಾಯ್ದೆ–1988ರ ಪ್ರಕಾರ ಅಪರಾಧ ಎಸಗಿರುವುದು ದೃಢಪಟ್ಟಿದೆ. ಆದ್ದರಿಂದ, ಆಪಾದಿತ ಅಧಿಕಾರಿಯ ಅಭಿಯೋಜನೆಗೆ ಒಳಪಡಿಸಲು ಅವರ ಸಕ್ಷಮ ಪ್ರಾಧಿಕಾರಿಯವರಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, 6ನೇ ಮಹಡಿ, ಕಾವೇರಿ ಭವನ, ಬೆಂಗಳೂರುರವರಿಂದ ಮಂಜೂರಾತಿ ಆದೇಶ ಅವಶ್ಯಕವಾಗಿರುತ್ತದೆ, ಅದನ್ನು ಪಡೆದು ಪೂರೈಸುವಂತೆ ಕೋರಿರುತ್ತಾರೆ. ಸದರಿ ಅಧಿಕಾರಿಯ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದ್ದರಿಂದ, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ:7, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಸದರಿ ಕಾಯ್ದೆ ಕಲಂ 19(1)(ಸಿ)ಯನ್ವಯ, ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಪೂರ್ವಾನುಮತಿಯನ್ನು ನೀಡುವಂತೆ ಮಂಜೂರಾತಿಯನ್ನು ಉಪ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಶ್ರೀ ಅಶೋಕ ಕಾಡಪ್ಪ ಜಾಡಗೌಡರವರ ವಿರುದ್ಧದ ಬೆಳಗಾವಿಯ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಪ್ರಕರಣ ಸಂ:23/2011ರ ಮೊಕದ್ದಮೆ ದಾಖಲಾದ ಸಂದರ್ಭದಲ್ಲಿ ಅಧಿಕಾರಿಯು ಖಾನಾಪುರದ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಪ್ರಸ್ತುತ ಅವರು ಬಡ್ತಿ ಹೊಂದಿದ ಹುದ್ದೆಯಾದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಸಿ.ಜೆ.ಎಂ. ನ್ಯಾಯಾಲಯ, ಬೆಳಗಾವಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಅವರು ಗ್ರೂಪ್ ಎ ಅಧಿಕಾರಿಯಾಗಿದ್ದಾರೆ. ಆದ್ದರಿಂದ, ಅವರನ್ನು ಸೇವೆಯಿಂದ ವಜಾ ಮಾಡುವ ಅಧಿಕಾರ ಸಕ್ಷಮ ಪ್ರಾಧಿಕಾರವಾದ ಸರ್ಕಾರಕ್ಕೆ ಇರುವ ಕಾರಣ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ:7, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಸದರಿ ಕಾಯ್ದೆಯ ಕಲಂ 19(1)(ಸಿ)ಯನ್ವಯ, ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರವನ್ನು ಪೂರ್ವಾನುಮತಿಯನ್ನು ನೀಡುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ವಿನಂತಿಸಿರುತ್ತಾರೆ.

ಆದ್ದರಿಂದ, ಸರ್ಕಾರವು, ಉಪ ಪೊಲೀಸ್ ಮಹಾ ನಿರೀಕ್ಷಕಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಮೇಲೆ (2)ರಲ್ಲಿ ಓದಲಾದ ದಿನಾಂಕ:12.04.2012ರ ಪತ್ರದೊಡನೆಯ ಮೇಲೆ (1)ರಲ್ಲಿ ಓದಲಾದ ತನಿಖಾಧಿಕಾರಿ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿರವರ ದಿನಾಂಕ:13.03.2012ರ ಪತ್ರದ ಜೊತೆಗೆ ಕಳುಹಿಸಿಕೊಟ್ಟಿರುವ ಅಂತಿಮ ವರದಿಯೊಂದಿಗಿದ್ದ ಮೇಲೆ (4)ರಲ್ಲಿ ಓದಲಾದ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಡಿಯಾಗೋ ಜಾರ್ಜ, ತಂದೆ:ಡೆವ್ಹಿಡ್ ಜಾರ್ಜ, ವಯಸ್ಸು:36 ವರ್ಷ, ಜನರಲ್ ಮ್ಯಾನೇಜರ್, ಆಟೋ ಇಂಡಸ್ಟ್ರೀಸ್, ಗೋವಾ ಪ್ರೈವೇಟ್ ಲಿಮಿಟೆಡ್, ಪೆಟ್ರೋಡೋ ನಿವಾಸಿ, ಮಡಗಾಂವ, ಗೋವಾರವರ ದಿನಾಂಕ:31.10.2011ರ ಫಿರ್ಯಾದು
2) ಬೆಳಗಾವಿಯ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ ನಂ:23/2011ರ ದಿನಾಂಕ:31.102011ರ ಪ್ರಥಮ ವರ್ತಮಾನ ವರದಿ:
3) ದಿನಾಂಕ:31.10.2011 ಮತ್ತು 02.12.2011 ಪಂಚನಾಮೆ
4) ದಿನಾಂಕ:02.12.2011ರ ಗುನ್ನಾ ಸ್ಥಳದ ಪಂಚನಾಮೆ
5) ಸರ್ಕಾರೇತರ ಸಂಸ್ಥೆಯಾದ TRUTH LAB, The Scientific Detectives, S.R. InfoTech Complex, 5/4-2, Tavarakeri Main Road, Koramangal, BANGALURU-29 ವಿಧಿವಿಜ್ಞಾನ ಪ್ರಯೋಗಾಲಯದ ವರದಿಯ ಪೈಲ್ ನಂ:TL/AV/001/B/2011, ದಿನಾಂಕ: 01.03.2012
6) ಕೃತ್ಯ ನಡೆದ ಸ್ಥಳದ ನಕಾಶೆ,
7) ಪ್ರಕರಣಕ್ಕೆ ಸಂಬಂಧಿಸಿದ ಸಿಡಿಯ Video frames,
8) ಫಿರ್ಯಾದಿ ಮತ್ತು ಸಾಕ್ಷಿಗಳಾದ ಈ ಕೆಳಕಂಡವರ ಹೇಳಿಕೆಗಳು:
    (1) ಶ್ರೀ ಡಿಯಾಗೋ ಜಾರ್ಜ, ತಂದೆ:ಡೆವ್ಹಿಡ್ ಜಾರ್ಜ, ಜನರಲ್ ಮ್ಯಾನೇಜರ್, ಆಟೋ ಇಂಡಸ್ಟ್ರೀಸ್, ಗೋವಾ ಪ್ರೈವೇಟ್ ಲಿಮಿಟೆಡ್, ಮಡಗಾಂವ ಗೋವಾ. ಪಿರ್ಯಾದಿದಾರ.
    (2) ಶ್ರೀ ಶ್ರೀಕಾಂತ ಮೋಹನ ಶಹಾಪೂರಕರ, ದ್ವಿತೀಯ ದರ್ಜೆ ಸಹಾಯಕರು, ಮುಖ್ಯ ಲೆಕ್ಕಾಧಿಕಾರಿಗಳ ಕಛೇರಿ, ಜಿಲ್ಲಾ ಪಂಚಾಯತ ಬೆಳಗಾವಿ. ಪಂಚ–1,
    (3) ಶ್ರೀ ಪ್ರಕಾಶ ವಿಠ್ಠೋಬಾ ಬಾಂದೇಕರ, ವದ್ವಿತೀಯ ದರ್ಜೆ ಸಹಾಯಕರು, ಸಹಾಯಕ ನಿರ್ದೇಶಕರ ಕಛೇರಿ, ನಗರ ಭೂಮಾಪನ, ಬೆಳಗಾವಿ. ಪಂಚ–2

(4) ಶ್ರೀ ದೇವದಾಸ ತಂದೆ:ಚಂದ್ರಕಾಂತ ಬಾಯೇಕರ, ಗಾವಾ ಸರ್ಕಾರದ ಅಗ್ನಿಶಾಮಕ ಸೇವೆಯಲ್ಲಿ ಡ್ರೈವರ್ ಕೆಲಸ.

(5) ಶ್ರೀ ವಿನಾಯಕ ಧರ್ಮೋ ಫೈ ಆಂಗ್ಲೆ, ಲೀಗಲ್ ಕನ್ಸಲ್‌ಸ್ಟಂಟ್, ಆಟೋ ಇಂಡಸ್ಟ್ರೀಸ್, ಗೋವಾ ಪ್ರೈವೇಟ್ ಲಿಮಿಟೆಡ್, ಮಡಗಾಂವ ಗೋವಾ.

(6) ಶ್ರೀ ಅಶ್ವಿನಿಕುಮಾರ್ ದಾಮೋದರ ನಾಯ್ಕ, ಮ್ಯಾನೇಜಿಂಗ್ ಡೈರೆಕ್ಟರ್, ಆಟೋ ಇಂಡಸ್ಟ್ರೀಸ್, ಗೋವಾ ಪ್ರೈವೇಟ್ ಲಿಮಿಟೆಡ್, ಮಡಗಾಂವ ಗೋವಾ.

(7) ಶ್ರೀ ಜಯಂತ ಮುಕುಂದ ತಿಣೇಕರ, ವಯಸ್ಸು:31 ವರ್ಷ, ಉದ್ಯೋಗ:ಬಿಜಿನೆಸ್. ಸಾ:ಮನೆ ನಂ:34, ಏಕದಂತ ವಾಘಳೆ ಗಲ್ಲಿ, ಖಾನಾಪೂರ, ಜಿಲ್ಲೆ ಬೆಳಗಾವಿ.

(8) ಶ್ರೀಮತಿ ಮಂಜುಳಾ ಬಾಬುರಾವ್ ಹಂಚಿನಮನಿ, ಬೆರಳಚುಗಾರರು(ಗುತ್ತಿಗೆ ಆಧಾರದ ಮೇಲೆ), ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಘನ ಜೆ.ಎಂ.ಎಫ್.ಸಿ, ಖಾನಾಪೂರ.

(9) ಶ್ರೀ ಸುನೀಲ ಭೂಪಾಲ ಕಟ್ಟಿ, ಟೈಪಿಸ್ಟ್ ಕಮ್ ಕ್ಲರ್ಕ್, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಘನ ಜೆ.ಎಂ.ಎಫ್.ಸಿ, ಖಾನಾಪೂರ.

(10) ಶ್ರೀ ಅಮಿರುದ್ದಿನ್ ಇಸ್ಮಾಯಿಲ್ಸಾಬ ಪಾಶ್ಚಾಪೂರೆ, ದಲಾಯತ್, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಘನ ಜೆ.ಎಂ.ಎಫ್.ಸಿ, ಖಾನಾಪೂರ.

(11) ಮೋಹನ ರಾಮಚಂದ್ರ ಪಾಟೀಲ, ಪೋಟೋಗ್ರಾಫರ್, ಶ್ರೀರಾಮ ಡಿಜಿಟಲ್ ಫೋಟೋ ಸ್ಟುಡಿಯೋ, ಸ್ಟೇಶನ್ ರೋಡ್, ಖಾನಾಪೂರ, ಜಿಲ್ಲೆ:ಬೆಳಗಾವಿ.

(12) ಶ್ರೀ ಶಿವಪ್ಪ ತಿಪ್ಪಣ್ಣ ತೇಲಿ, ನಾಗರೀಕ ಪೊಲೀಸ್ ಕಾನ್ಸ್ಟೇಬಲ್, ಬ.ನಂ:1496, ಖಾನಾಪೂರ ಪೊಲೀಸ್ ಠಾಣೆ, ಜಿಲ್ಲೆ:ಬೆಳಗಾವಿ,

(13) ಶ್ರೀ ವಜ್ರಕಾಂತ ನಾಗೇಂದ್ರ ಕುಲಕರ್ಣಿ, ಸಿ.ಪಿ.ಸಿ, ಬ.ನಂ:1501, ಘಟಪ್ರಭಾ ಪೊಲೀಸ್ ಠಾಣೆ, ಜಿಲ್ಲೆ:ಬೆಳಗಾವಿ.

(14) ಶ್ರೀ ಎ.ಆರ್.ಗುರನಗೌಡರ, ನಾಗರೀಕಾ ಪೊಲೀಸ್ ಕಾನ್ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಬೆಳಗಾವಿ.

(15) ಶ್ರೀ ಎಂ.ಕೆ.ಶೇಖ, ನಾಗರೀಕಾ ಪೊಲೀಸ್ ಕಾನ್ಸ್ಟೇಬಲ್, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಬೆಳಗಾವಿ.

(16) ಶ್ರೀ ಎಸ್.ಎಂ.ಬಡಿಗೇರ, ನಾಗರೀಕಾ ಪೊಲೀಸ್ ಕಾನ್ಸ್ಟೇಬಲ್, ಲೋಕಾಯುಕ್ತ ಪೊಲೀಸ್ ಠಾಣೆ, ಬೆಳಗಾವಿ.

9) ಲಂಚ ಕೇಳಲು ಆಧಾರವಾದ ಕಡತ / ದಾಖಲೆ: ಖಾನಾಪೂರದ ಘನ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಬಾಕಿಯಿರುವ ಸಿ.ಸಿ.ನಂ:370/08ರ ಪ್ರಕರಣ.

10) ಆಪಾಧಿತ ಅಧಿಕಾರಿಯಾದ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರ ವಿರುದ್ಧದ ಬೆಳಗಾವಿಯ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಪ್ರಕರಣ ಸಂ:23/2011ರ ಮೊಕದ್ದಮೆ ದಾಖಲಾದ ಸಂದರ್ಭದಲ್ಲಿ ಅಧಿಕಾರಿಯು ಖಾನಾಪುರದ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಬಡ್ತಿ ಹೊಂದಿದ್ದರಿಂದ ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಸಿ.ಜೆ.ಎಂ. ನ್ಯಾಯಾಲಯ, ಬೆಳಗಾವಿ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಇವರ ಸಮಜಾಯಿಷಿ, ಹೇಳಿಕೆ.

ಸಿ.ಸಿ. ನಂ:370/08ರ ಸಂಬಂಧ ಘನ ಜೆ.ಎಂ.ಎಫ್.ಸಿ ನ್ಯಾಯಾಲಯ, ಖಾನಾಪೂರ ದಿನಾಂಕ:21.10.2011ರ ಪಾರ್ವಡಿಂಗ್ ಪತ್ರದಲ್ಲಿ ಆಪಾಧಿತ ಅಧಿಕಾರಿಯಾದ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರ ವಿರುದ್ಧದ ಶ್ರೀ ಜಂಯಂತ ತಿನೇಕರ ಮತ್ತು ಡಿಯಾಗೋ ಜಾರ್ಜ ಇವರುಗಳ ದೂರಿನ ದಿನಾಂಕ:21.10.2011ರ ಎರಡು ಪತ್ರಗಳನ್ನು ಒಂದು ಸಿಡಿ, ಎರಡು ಪೋಟೋ, ಡಿಯಾಗೋ ಜಾರ್ಜ ಇವರ ವಾಹನ ಚಾಲನೆಯ DLನ ಜೆರಾಕ್ಸ್, ನ್ಯಾಯಾಲಯದ ದೃಢೀಕೃತ ಅರ್ಡರ್ ಶೀಟ್ ದಿನಾಂಕ: 21.10.2011 ಇವುಗಳನ್ನು ಎಸ್.ಪಿ., ಕರ್ನಾಟಕ ಲೋಕಾಯುಕ್ತ, ಬೆಳಗಾವಿ ಇವರಿಗೆ ಕಳುಹಿಸಿಕೊಟ್ಟು ಇದರ ಬಗ್ಗೆ ತನಿಖೆ ಮಾಡಿ ದಿನಾಂಕ: 15.11.2011ರ ಒಳಗಾಗಿ ವರದಿ ಸಲ್ಲಿಸುವಂತೆ ಆದೇಶಿಸಿರುತ್ತಾರೆ. ಅವರು ಅವುಗಳನ್ನು ತನಿಖಾಧಿಕಾರಿಯಾದ ಶ್ರೀ ಹೆಚ್.ಜಿ.ಪಾಟೀಲ, ಪೊಲೀಸ್ ಉಪಾಧೀಕ್ಷರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿ ಇವರಿಗೆ ನೀಡಿ ತನಿಖೆ ಕೈಗೊಳ್ಳಲು ಆದೇಶಿಸಿರುತ್ತಾರೆ. ಆಪಾಧಿತ ಅಧಿಕಾರಿಯಾದ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ರೀತ್ಯ ಎಸಗಿರುವ ದಂಡನಾರ್ಹ ಅಪರಾಧ ಪ್ರಕರಣದ ಬಗ್ಗೆ ದಿನಾಂಕ: 31.10.2011ರಂದು ಬೆಳಗಾವಿಯ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರ ವಿರುದ್ಧ ತನಿಖಾಧಿಕಾರಿರವರು ಮೊಕದ್ದಮೆ ಸಂಖ್ಯೆ: 23/2011ನ್ನು ದಾಖಲಿಸಿಕೊಂಡಿರುತ್ತಾರೆ.

ಫಿರ್ಯಾದಿದಾರರಾದ ಶ್ರೀ ಡಿಯಾಗೋ ಜಾರ್ಜ, ಜನರಲ್ ಮ್ಯಾನೇಜರ್, ಆಟೋ ಇಂಡಸ್ಟ್ರೀಸ್, ಗೋವಾ ಪ್ರೈವೇಟ್ ಲಿಮಿಟೆಡ್, ಮಡಗಾಂವ ಗೋವಾ ಇವರು ದಿನಾಂಕ: 21.10.2011ರಂದು ಘನ ಜೆ.ಎಂ.ಎಫ್.ಸಿ ನ್ಯಾಯಾಲಯ, ಖಾನಾಪೂರದ ಸಿ.ಸಿ. ನಂ:370/08ರ

ಕ್ರಿಮಿನಲ್ ಪ್ರಕರಣದ ಸಂಬಂಧ ನ್ಯಾಯಾಲಯಕ್ಕೆ ಹಾಜರಾಗಲು ಶ್ರೀ ಅಶ್ವಿನಿಕುಮಾರ್ ಡಿ. ನಾಯ್ಕ ಎಂಬುವವರೊಡನೆ ಹೋದಾಗ ಘನ ನ್ಯಾಯಾಲಯದ ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರಾಗಿದ್ದ ಆಪಾಧಿತ ಅಧಿಕಾರಿಯಾದ ಶ್ರೀ ಅಶೋಕ ಕಾಡಪ್ಪ ಜಾಡಗೌಡ ಇವರು ಸರ್ಕಾರಿ ಕೆಲಸವನ್ನು ಮಾಡಲು ಮೊದಲ ಬಾರಿಗೆ ₹.1000–00ಗಳ ಅಕ್ರಮ ಸಂಭಾವನೆಯನ್ನು ಕೇಳಿದ್ದು, ಅದರಂತೆ ₹.500/ಗಳ ಮುಖಬೆಲೆಯ PDQ ಎಂದು ಮಾರ್ಕ್ ಮಾಡಿದ್ದ ಎರಡು ನೋಟುಗಳ ₹.1000–00ಗಳನ್ನು ಅದೇ ದಿನ ಅಂದರೆ, ದಿನಾಂಕ:21.10.2011ರಂದು ಮಧ್ಯಾಹ್ನ 12.30ಗಂಟೆಗೆ ಘನ ಜೆ.ಎಂ.ಎಫ್.ಸಿ ನ್ಯಾಯಾಲಯ, ಖಾನಾಪೂರದಲ್ಲಿರುವ ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರವರ ಕ್ಯಾಬಿನನಲ್ಲಿ ನೀಡಿದ್ದು, ಆಪಾಧಿತ ಅಧಿಕಾರಿಯಾದ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರು ಸ್ವೀಕರಿಸಿ, ಅವರ ಕೋಟಿನ ಬಲಗಡೆಯ ಕಿಸೆಯಲ್ಲಿ ಇಟ್ಟುಕೊಂಡಿದ್ದನ್ನು ಶ್ರೀ ದೇವದಾಸ ಬಾಯೇಕರ ಎಂಬುವವರಿಂದ ಅವರ ಮೊಬೈಲ್ ಮುಖಾಂತರ ವಿಡಿಯೋ ಶೂಟಿಂಗ್ ಮಾಡಿಸಿರುತ್ತಾರೆ. ಪುನ: ಅದೇ ದಿವಸ ಅಂದರೆ ದಿನಾಂಕ:21.10.2011ರಂದು ಎರಡನೇ ಬಾರಿಗೆ ಸದರಿ ಅಧಿಕಾರಿಯು ₹.1000–00ಗಳನ್ನು ಕೊಡಲು ಕೋರಿದ್ದು, ನಂ: 4ಸಿಕ್ಯೂ 789747ರ ₹.1000–00ಗಳ ಮುಖಬೆಲೆಯ ಒಂದು ನೋಟನ್ನು ಕೊಡುವ ಸಮಯದಲ್ಲಿ ಮತ್ತೆ ಶ್ರೀ ದೇವದಾಸ ಬಾಯೇಕರ ಎಂಬುವವರಿಂದ ಅವರ ಮೊಬೈಲ್ ಮುಖಾಂತರ ವಿಡಿಯೋ ರೆಕಾರ್ಡ್ ಮಾಡುತ್ತಿದ್ದನ್ನು ಅರಿತು ಕೈಯಲ್ಲಿದ್ದ ಮೊಬೈಲ್‌ನ್ನು ಶ್ರೀ ಅಶೋಕ ಕಾಡಪ್ಪ ಜಾಡಗೌಡರು ಕಸಿದುಕೊಂಡು ಆಗ ಮಾಡಿದ್ದ ವಿಡಿಯೋ ರೆಕಾರ್ಡ್‌ನ್ನು ಡಿಲೀಟ್ ಮಾಡಿರುತ್ತಾರೆ. ಸದರಿ ಘನ ನ್ಯಾಯಾಲಯದ ಮಾನ್ಯ ನ್ಯಾಯಾಧೀಶರಿಗೆ ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರಾದ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರು ಲಂಚದ ಹಣ ಪಡೆದುಕೊಂಡ ವಿಷಯವನ್ನೂ, ಅದನ್ನು ಮೊಬೈಲ್‌ನಲ್ಲಿ ವಿಡಿಯೋ ರೆಕಾರ್ಡ್ ಮಾಡಲಾಗಿದೆ ಎಂಬುದನ್ನೂ ತೆರೆದ ನ್ಯಾಯಾಲಯದಲ್ಲಿ ತಿಳಿಸಿದ್ದು, ಮಾನ್ಯ ನ್ಯಾಯಾಧೀಶರು ದೂರನ್ನು ಲಿಖಿತವಾಗಿ ನ್ಯಾಯಾಲಯಕ್ಕೆ ಸಲ್ಲಿಸಲು ಆದೇಶಿಸಿರುತ್ತಾರೆ. ಅದರನ್ವಯ ದಿನಾಂಕ:21.10.2011ರಂದೇ ದೂರನ್ನು ಘನ ಜೆ.ಎಂ.ಎಫ್.ಸಿ. ನ್ಯಾಯಾಲಯ, ಖಾನಾಪೂರ ಇವರಿಗೆ ಸಲ್ಲಿಸಿರುತ್ತಾರೆ. ಘನ ನ್ಯಾಯಾಲಯದ ದಿನಾಂಕ:21.10.2011ರ ಫಾರ್ವರ್ಡಿಂಗ್ ಪತ್ರದಲ್ಲಿ ಆಪಾದಿತರಾದ ಅಧಿಕಾರಿಯಾದ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರ ವಿರುದ್ಧದ ಶ್ರೀ ಜಯಂತ ತಿನೇಕರ ಮತ್ತು ಶ್ರೀ ಡಿಯಾಗೋ ಜಾರ್ಜ ಇವರುಗಳ ದಿನಾಂಕ: 21.10.2011ರ ಎರಡು ಪತ್ರಗಳನ್ನು ಒಂದು ಸಿಡಿ, ಎರಡು ಪೋಟೋ, ಡಿಯಾಗೋ ಜಾರ್ಜ ಇವರ ವಾಹನ ಚಾಲನೆಯ DLನ ಜೆರಾಕ್ಸ್, ನ್ಯಾಯಾಲಯದ ದೃಢೀಕೃತ ಅರ್ಡರ್ ಶೀಟ್ ದಿನಾಂಕ:21.10.2011 ಇವುಗಳೊಡನೆ ಎಸ್.ಪಿ., ಕರ್ನಾಟಕ ಲೋಕಾಯುಕ್ತ, ಬೆಳಗಾವಿ ಇವರಿಗೆ ಕಳುಹಿಸಿಕೊಟ್ಟು ಇದರ ಬಗ್ಗೆ ತನಿಖೆ ಮಾಡಿ ದಿನಾಂಕ:15.11.2011ರ ಒಳಗಾಗಿ ವರದಿ ಸಲ್ಲಿಸುವಂತೆ ಆದೇಶಿಸಿರುತ್ತಾರೆ. ಅವರು ಅವುಗಳನ್ನು ತನಿಖಾಧಿಕಾರಿಯಾದ ಶ್ರೀ ಹೆಚ್.ಜಿ.ಪಾಟೀಲ, ಪೋಲೀಸ್ ಉಪಾಧೀಕ್ಷರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿ ತನಿಖೆ ಕೈಗೊಳ್ಳಲು ನೀಡಿರುತ್ತಾರೆ. ಸದರಿ ಪ್ರಕರಣವು ನ್ಯಾಯಾಲಯದಿಂದ ತನಿಖೆಗಾಗಿ ಬಂದ ಪ್ರಕರಣವಾದ್ದರಿಂದ ವಿಳಂಬವಾಗಿ ದಾಖಲಾಗಿರುತ್ತದೆ. ಆದ್ದರಿಂದ, ಲಂಚದ ಹಣವನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲ ಎಂಬ ಆಡಳಿತಾತ್ಮಕ ದೋಷವನ್ನು ತಿಳಿಸಲಾಗಿದೆ. ಲಂಚದ ಹಣವಾದ ₹.1000–00ಗಳನ್ನು ಸ್ವೀಕರಿಸಿರುವುದು ಈ ಬಗ್ಗೆ ಮಾಡಿರುವ ಸಿ.ಡಿ.ಯನ್ನು ವಿಶ್ಲೇಷಿಸಿ ಸರ್ಕಾರೇತರ ಸಂಸ್ಥೆಯಾದ TRUTH LAB, The Scientific Detectives, S.R. InfoTech Complex, No:5/4-2, Tavarakeri Main Road, Koramangal, BANGALURU-29ರವರು ಅವರ ವಿಧಿವಿಜ್ಞಾನ ಪ್ರಯೋಗಾಲಯದಿಂದ ನೀಡಿರುವ ಪರೀಕ್ಷಾ ವರದಿಯಿಂದ ಸಾಬೀತಾಗಿರುತ್ತದೆ. ಆದ್ದರಿಂದ, ತನಿಖಾಧಿಕಾರಿರವರು ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ರೀತ್ಯ ಎಸಗಿರುವ ದಂಡನಾರ್ಹ ಅಪರಾಧ ಪ್ರಕರಣದ ಬಗ್ಗೆ ದಿನಾಂಕ: 31.10.2011ರಂದು ಬೆಳಗಾವಿಯ ಲೋಕಾಯುಕ್ತ ಪೋಲೀಸ್ ಠಾಣೆಯಲ್ಲಿ ಶ್ರೀ ಅಶೋಕ ಕಾಡಪ್ಪ ಜಾಡಗೌಡರವರ ವಿರುದ್ಧ ಮೊಕದ್ದಮೆ ಸಂಖ್ಯೆ:23/2011ನ್ನು ದಾಖಲಿಸಿಕೊಂಡಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರಾದ ಶ್ರೀ ಎ.ಕೆ.ಜಾಡಗೌಡ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ–1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 19(1)(ಬಿ) ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸರ್ಕಾರವು ಶ್ರೀ ಎ.ಕೆ.ಜಾಡಗೌಡ, ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬೆಳಗಾವಿ ಇವರನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾಗಿದೆ. ಆದ್ದರಿಂದ, ಸರ್ಕಾರಿ ಕೆಲಸವನ್ನು ಮಾಡಲು ದಿನಾಂಕ:21.10.2011ರಂದು ಫಿರ್ಯಾದಿದಾರರಿಂದ ಒಟ್ಟು ₹.2000–00ಗಳ ಲಂಚದ ಹಣಕ್ಕೆ ಬೇಡಿಕೆ ಇಟ್ಟು, ಅದರಲ್ಲಿ ಮೊದಲನೇ ಬಾರಿಗೆ ₹.1,000–00ಗಳ ಲಂಚದ ಹಣವನ್ನು ಪಡೆದು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 7 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ರೀತ್ಯ ಎಸಗಿರುವ ಅಪರಾಧಕ್ಕೆ ಸದರಿ ಕಾಯ್ದೆಯ ಕಲಂ 19(1)(ಬಿ)ರ ರೀತ್ಯ ಅಭಿಯೋಜನೆಗೆ ಒಳಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 263 ಪಿಪಿಇ 2012, ಬೆಂಗಳೂರು, ದಿನಾಂಕ: 13ನೇ ಜುಲೈ 2012**

ಆರೋಪಿತರಾದ ಶ್ರೀ ಎ.ಕೆ.ಜಾಡಗೌಡ, ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ., ನ್ಯಾಯಾಲಯ, ಖಾನಾಪುರ, ಬೆಳಗಾವಿ ಜಿಲ್ಲೆ ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬೆಳಗಾವಿ ಇವರ ವಿರುದ್ಧ ಲೋಕಾಯುಕ್ತ ಠಾಣೆಯಲ್ಲಿ ದಾಖಲಿಸಿರುವ ಸಂ:23/2011ರ ಪ್ರಕರಣದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ

13(2)ರ ರೀತ್ಯ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸದರಿ ಕಾಯ್ದೆಯ ಕಲಂ 19(1)(ಬಿ)ರನ್ವಯ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಈ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ(ವ್ಯವಹಾರ) ನಿರ್ವಹಣೆ ನಿಯಮಾವಳಿ–1977ರ ನಿಯಮ 19(1)ರನ್ವಯ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 13.07.2012ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ.ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು – ಬಿ)

**ಪಿ.ಆರ್. 1982**

**ಒಳಾಡಳಿತ ಸಚಿವಾಲಯ**

**ವಿಷಯ:** ಜಂಟಿ ಪೊಲೀಸ್ ಕಮೀಷನರ್, ಅಪರಾಧ(ಪೂರ್ವ) ಮತ್ತು ಅಪರಾಧ (ಪಶ್ಚಿಮ) ಬೆಂಗಳೂರು ನಗರ ಹಾಗು ಉಪ ಪೊಲೀಸ್ ಕಮೀಷನರ್, ಅಪರಾಧ, ಬೆಂಗಳೂರು ನಗರ ಹುದ್ದೆಗಳ ಸೃಜನೆ ಹಾಗೂ ಬೆಂಗಳೂರು ನಗರದಲ್ಲಿ ಹೊಸದಾಗಿ ಸಂಚಾರ ಉತ್ತರ ವಿಭಾಗವನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ: ಆರ್.ಎಲ್.ಎನ್(3)/13/2011–12, ದಿನಾಂಕ: 31.01.2012 ಮತ್ತು 28.02.2012.

**ಪ್ರಸ್ತಾವನೆ:–**

ಮೇಲೆ ಓದಲಾದ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 192 ಎಸ್‌ಪಿಎಸ್ 2011, ದಿನಾಂಕ:02/03/2012ರಲ್ಲಿ ಜಂಟಿ ಪೊಲೀಸ್ ಕಮೀಷನರ್, ಅಪರಾಧ, ಬೆಂಗಳೂರು ನಗರ ಈ ಹುದ್ದೆಗಳನ್ನು ವಿಂಗಡಿಸಿ [1] ಜಂಟಿ ಪೊಲೀಸ್ ಕಮೀಷನರ್, ಅಪರಾಧ [ಪೂರ್ವ] ಮತ್ತು [2] ಜಂಟಿ ಪೊಲೀಸ್ ಕಮೀಷನರ್, ಅಪರಾಧ [ಪಶ್ಚಿಮ]ಗಳನ್ನಾಗಿ ವಿಂಗಡಿಸಿ ಆದೇಶ ಹೊರಡಿಸಿದೆ. ಹಾಲಿ ಇರುವ ಡಿಐಜಿಪಿ, ಜಂಟಿ ಪೊಲೀಸ್ ಕಮೀಷನರ್, ಅಪರಾಧ [ಪಶ್ಚಿಮ], ಬೆಂಗಳೂರು ನಗರ ಹುದ್ದೆಯು ಲಭ್ಯವಿದ್ದು, ಹೊಸದಾಗಿ ವಿಂಗಡಿಸಿದ ಡಿಐಜಿಪಿ, ಜಂಟಿ ಪೊಲೀಸ್ ಕಮೀಷನರ್, ಅಪರಾಧ [ಪೂರ್ವ], ಬೆಂಗಳೂರು ನಗರ ಹುದ್ದೆಯನ್ನು ಸೃಜಿಸಿ ಕ್ರಮಬದ್ದಗೊಳಿಸುವುದು ಅತ್ಯವಶ್ಯಕವಾಗಿದ್ದು ಮಂಜೂರಾತಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 49 ಪಿಓಪಿ 2012, ಬೆಂಗಳೂರು, ದಿನಾಂಕ: 12/07/2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹೊಸದಾಗಿ ವಿಂಗಡಿಸಿದ ಡಿಐಜಿಪಿ, ಜಂಟಿ ಪೊಲೀಸ್ ಕಮೀಷನರ್, ಅಪರಾಧ [ಪೂರ್ವ], ಬೆಂಗಳೂರು ನಗರ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 227 ವೆಚ್ಚ 11/2012, ದಿನಾಂಕ: 27/06/2012ರಲ್ಲಿ ನೀಡಿದ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಪುಟ್ಟೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಪೊಲೀಸ್ ವೆಚ್ಚ)

**ಪಿ.ಆರ್. 2024**